ಪ್ರಕಟನೆಯ ೨೮ ನೆಯ ವರ್ಷ : ೧೯೯೩

# ಸಂಕ್ರಮಣ

೨೫೫

---

ಡಾ. ಸಿ. ಎನ್. ರಾಮಚಂದ್ರನ್
ಕಥನ ಶಾಸ್ತ್ರ (Narratology)

ಡಾ. ಎಚ್. ಎಂ. ಮಹೇಶ್ವರಯ್ಯ
ಬೆಳಕಿನ ನಾಡಿನಲ್ಲಿ

ಡಾ. ಎಂ. ಆರ್. ಮಂದಾರವಲ್ಲಿ
ಧರ್ಮ : ಪಾರಂಪರಿಕ ಮತ್ತು ವಾಸ್ತವಿಕ ನೆಲೆ

ಡಾ. ಸಿ. ಪಾರ್ವತಮ್ಮ
'ಗ್ರಾಮದೇವತೆಗಳು ಹಾಗೂ ಊರೊಟ್ಟಿನ ಸಂಬಂಧಗಳು' : ಪ್ರತಿಕ್ರಿಯೆ

ಸಿದ್ಧರಾಮ ಹೊನ್ಕಲ್. ಐ. ಎ. ಲೋಕಾಪೂರ, ಶ್ರೀಕಾಂತ ಪಾಟೀಲ, ಇವರ ಕವನಗಳು

ಚಂಪಾಕಾಲಂ
ಚೆಲುವಿಯ ಸುತ್ತ ಒಂದು ಲಹರಿ

---

ಸಂಪುಟ ೨೮: ಸಂಚಿಕೆ ೧೧ ನವಂಬರ ೧೯೯೩

// ಸಂಕ್ರಮಣ

ನವೆಂಬರ ೧೯೯೩

ಸಂಪುಟ ೨೮ : ಸಂಚಿಕೆ ೧೧

ಸಂಪಾದಕಿ
ನೀಲಾ ಪಾಟೀಲ
ಸಲಹಾ ಸಂಪಾದಕ
ಚಂದ್ರಶೇಖರ ಪಾಟೀಲ



**SANKRAMANA 255**
A Monthly in Kannada
November 1993 Vol. XXVIII No. 11
Sankramana Prakashana Dharwad-580 001 Phone : 40509
Printed at Chandana Mudrana, Dharwad-8 Phone : 44863
Annual Subscription : Rs. 50/-

# ಚೆಲುವಿಯು ಮತ್ತು ಒಂದು ಲಹರಿ

## ಚಂದ್ರಶೇಖರ ಪಾಟೀಲ

ದೂರದರ್ಶನದಲ್ಲಿ 'ಚೆಲುವಿ' ನೋಡುತ್ತಿದ್ದೆ.

ಹಳ್ಳಿಯ ಒಬ್ಬ ಬಡ ಹುಡುಗಿ ಮುನಿಯೊಬ್ಬನಿಗೆ ಹಸಿದಾಗ ರೊಟ್ಟಿ ಕೊಡುತ್ತಾಳೆ. ಅವನು ಅವಳಿಗೊಂದು ಮಂತ್ರ ಕಲಿಸುತ್ತಾನೆ. ಆ ಮಂತ್ರದ ಬಲದಿಂದ ಅವಳು ತನಗೆ ತಿಳಿದಾಗ ಹೂವಿನ ಗಿಡವಾಗಬಲ್ಲಳು—ಒಂದು ಕೊಡ ನೀರು ತಲೆ ಮೇಲೆ ಬಿದ್ದಾಗ. ಇನ್ನೊಂದು ಕೊಡ ನೀರು ಬಿದ್ದಾಗ ಮತ್ತೆ ಮನುಷ್ಯಳಾಗ ಬಲ್ಲಳು ಅವಳು. ಈ ಫ್ಯಾಂಟಸಿಯ ಎಳೆ ಹಿಡಿದು ಕತೆ ಒಂದು ದುರಂತವಾಗುತ್ತದೆ... ...

'ನೀನು ನೀನಾಗು,' 'ನಿನ್ನನ್ನು ನೀನು ಅರಿತುಕೋ,' 'ತನ್ನರಿವೆ ತನಗೆ ಗುರು'— ಇತ್ಯಾದಿ ವಾಣಿಗಳನ್ನು ನಾವು ಅನೇಕ ಸಂತರಿಂದ, ತತ್ವಜ್ಞಾನಿಗಳಿಂದ ಕೇಳಿದ್ದೇವೆ. ಇದು ಒಂದು ದಿಕ್ಕು. ಇನ್ನೊಂದು ದಿಕ್ಕಿನಲ್ಲಿ ನಾನು ಸಾಯುಂವತನಕ ನಾನಾಗಿಯೇ ಆಗಿ—ಇದೇ ಕಾಲು, ಕೈ, ಮುಖ, ಇದೇ ತಲೆ, ಇದೇ ಮನಸ್ಸು, ಇದೇ ಇದೇ ಇದೇ ಆಗಿ—ಉಳಿಯದೆ 'ಬೇರೆ ಏನಾದರೂ' ಆಗಬೇಕು ಎಂಬ ತುಡಿತವೂ ಮನುಷ್ಯನ ಒಂದು ಮೂಲಭೂತವಾದ ಸಹಜ ಪ್ರವೃತ್ತಿಯೇ ಆಗಿರಬೇಕು. ಈ ಬೇರೆ ಏನೋ ಆಗುವುದು ತಾತ್ಕಾಲಿಕವಾಗಿದ್ದರೂ ಚಿಂತೆ ಇಲ್ಲ, ಒಟ್ಟಿನಲ್ಲಿ 'ಆಗಬೇಕು' ಎಂಬ ಹಂಬಲ ಮಾತ್ರ—'ಇರು' 'ಆಗು'ಗಳ ಸಂಘರ್ಷ ಮಾತ್ರ—ಇದ್ದದ್ದೇ.

ಬೇರು, ಕಣ್ಣಿಗೆ ಕಾಣದ ಭೂಮಿಯ ಅನಂತತೆಯಲ್ಲಿ. ಟೊಂಗೆ, ಕಣ್ಣಿಗೆ ಕಂಡರೂ ಅರ್ಥವಾಗದ ಆಕಾಶದ ಅನಂತತೆಯಲ್ಲಿ. ನಡುವೆ ಬೊಡ್ಡೆ. ಟೊಂಗೆಯ ಸುತ್ತ ಋತುಮಾನಕ್ಕೆ ತಕ್ಕಂತೆ ನಸುಗೆಂಪು, ಹಸಿರು, ಹಳದಿ, ಕಪ್ಪು. ಆಗುವ ಎಲೆಗಳ ಕಲ ಕಲರವ. ಮೈ ತುಂಬ ಹರಿವ ಜೀವರಸ ಸ್ಫೋಟಗಳ ಸರಣಿಯಾದಂತೆ ಮೊಗ್ಗೆಯಾಗಿ ಮೂಡಿ ಹೂವಾಗಿ ಅರಳುವ ಸಂಭ್ರಮ. ಮತ್ತೆ ಚಳಿಗಾಲದಲ್ಲಿ ಎಲ್ಲಾ ಉದುರಿಸಿ.

ಕೊಂಡು ಬೋಳು ಬೋಳಾಗಿ ವೈರಾಗ್ಯ ಮೂರ್ತಿಯಾಗಿ ನಿಲ್ಲುವ ಏಕಾಂಗಿತನ ... ಇಂಥ ಗಿಡಗಳನ್ನು ನೋಡಿದಾಗ ನನಗಂತೂ ಒಮ್ಮೆಯಾದರೂ ನಾನು ಹಾಗಾಗ ಬಾರದೇ ಅಂತ ಒಳಗೊಳಗೇ ಸಂಕಟವಾಗುತ್ತದೆ.

ಚೆಲುವಿ ಯಾವುದೋ ಅಸಾಧ್ಯ ಲೋಕದ ರಾಯಭಾರಿಯಾಗಿ ಗಂಧವತಿಯಾದಾಗ ಅವಳ ಗಂಧಕ್ಕೆ ಮನಸೋತ ಚೆಲುವನೊಬ್ಬ ಅವಳ ಮದುವೆಯಾಗುತ್ತಾನೆ. ಮಂತ್ರ ಬಲದಿಂದ ಮನಸ್ಸಿಗೆ ತೋಚಿದಾಗೆಲ್ಲ ಹೂವಿನ ತೇರು ಎಳೆಯುತ್ತಾರೆ ಮುಂದೊಂದು ಪ್ರಸಂಗದಲ್ಲಿ ಚೆಲುವಿ ಮೊದಲ ಮಂತ್ರದಿಂದ ಹೂವಿನ ಗಿಡವಾಗಿ, ಮುಂದಿನ ಮಂತ್ರ ಹೇಳುವುದರೊಳಗಾಗಿ ಏನೋ ಸಂಭವಿಸಿ ಅರ್ಧ ಗಿಡ, ಅರ್ಧ ಮನುಷ್ಯಳಾಗಿ ಉಳಿಯುತ್ತಾಳೆ

ದೂರದರ್ಶನಕ್ಕಾಗಿಯೇ ನಿರ್ಮಿತವಾದ ಈ ಕಿರುಚಿತ್ರದ ಒಂದು ವೈಶಿಷ್ಟ್ಯವೆಂದರೆ ಚೆಲುವಿಯ ರೂಪಾಂತರ—ವಾಸ್ತವದಿಂದ ಫ್ಯಾಂಟಸಿಗೆ ರೂಪ ಬದಲಾಗುವ ಪ್ರಕ್ರಿಯೆ—ಅತ್ಯಂತ ಸಹಜವೆಂಬಂತೆ, ನಮ್ಮ ಕಣ್ಣೆದುರಿಗೇ ಸಹಜವಾಗಿ ನಡೆ ಯುವ ನೈಜ ಕ್ರಿಯೆಯಂತೆ ಚಿತ್ರಿತವಾಗಿರುವುದು.... ನಮ್ಮ ಕನಸುಗಳೂ ಹೀಗೆಯೇ. ... ಹಾಗೆ ನೋಡಿದರೆ, ಸದಾ ಅರ್ಧ ಎಚ್ಚರ ಅರ್ಧ ಕನಸಿನಲ್ಲಿ ಇರುವ ನನ್ನಂಥವರಿ ಗಂತೂ ಇಂಥ ನಿರಂತರ ರೂಪಾಂತರವೇ ಸಹಜ ಬದುಕು ಅನ್ನಿಸುವುದು ಸಹಜವೇ.

'ಚೆಲುವಿ'-ಕಥೆ ಕರ್ನಾಟಕದ ಜಾನಪದ ಮೂಲದಿಂದ ಬಂದದ್ದು ಎ. ಕೆ. ರಾಮಾನು ಜನ್ ಸಂಕಲಿಸಿದ ಸಾವಿರಾರು ಕಥೆಗಳಲ್ಲಿ ಇದೂ ಒಂದು. 'ಜಾನಪದ'ವೆಂದರೆ ಅದೊಂದು ಬೇವಾರ್ಸಿ ಸಾಹಿತ್ಯ; ಅಂದರೆ ವಾರಸುದಾರರಿಲ್ಲದ ಸಾಹಿತ್ಯ. ಟ್ರೇನು ಅಪ ಘಾತ, ನೆರೆಹಾವಳಿ, ಭೂಕಂಪ ಇತ್ಯಾದಿಗಳು ಸಂಭವಿಸಿದಾಗ ಸಿಕ್ಕವರು ಸಿಕ್ಕದ್ದನ್ನು ಸಿಕ್ಕಷ್ಟು ದೋಚಿಕೊಂಡು ಹೋಗುವಂತೆ ಈ ಜಾನಪದವನ್ನು ಯಾರಾದರೂ ಕೊಳ್ಳೆ ಹೊಡೆಯಬಹುದು. "ಅಪ್ಪನಿಲ್ಲದವರಿಗೆ ನಾನೇ ಅಪ್ಪ"- ಎಂಬವರಿಗೆ ಇಲ್ಲಿ ಸದಾ ಸ್ವಾಗತ, ಇದನ್ನು ಸೃಷ್ಟಿಸಿದವರು ತಮ್ಮ ಹೆಸರು, ಜನ್ಮ ದಿನಾಂಕ, ಸ್ಥಳ ಇತ್ಯಾದಿ ದಾಖಲಿಸಿ ಹೋಗಿದ್ದರೆ ಇವತ್ತಿನ ಅನೇಕ ಸಂಶೋಧಕರು ಕೂಳು ನೀರಿಲ್ಲದೆ ಸಾಯ ಬಹುದಾಗಿತ್ತು. ಇಂದಿನ ಸಂಶೋಧನೆ ಯಾವ ಎತ್ತರವನ್ನು ಆಳವನ್ನು ತಲುಪಿದೆ ಅಂದರೆ ಕೆಲವರು ಕವಿಗಳ ಸಮಾಧಿ ಹುಡುಕುತ್ತಾ ಹೋದರೆ, ಇನ್ನು ಕೆಲವರು ಕವಿ ಗಳ ತಂದೆ-ತಾಯಿಗಳನ್ನೇ ಹುಡುಕುತ್ತ ಹೊರಟಿದ್ದಾರೆ. ಇರಲಿ.

ಈ ಕೊಳ್ಳೆ ಹೊಡೆಯುವ, ಕದಿಯುವ ಕೆಲಸಕ್ಕೂ ಚೆಲುವಿಯ ರೂಪಾಂತರಕ್ಕೂ ದೂರದ ಸಂಬಂಧವಾದರೂ ಇದೆ. ಕದ್ದ ಮಾಲನ್ನು ಇದ್ದ ಹಾಗೆಯೇ ಇಟ್ಟರೆ, ಇಟ್ಟು ಪ್ರದರ್ಶಿಸಿದರೆ ಅದಕ್ಕೆ 'ಶುದ್ಧ' ಕಳವು ಅನ್ನಬಹುದು. ಅದರಲ್ಲೂ ಮಾಲಿನ

ಮೂಲ ಮಾಲಿಕನ ಹೆಸರು ಗೊತ್ತಿದ್ದರಂತೂ ಇಂಥದಕ್ಕೆ 'ಕೃತಿಚೌರ್ಯ' ಎಂದು ಹೆಸರಿಸಬಹುದು ನೇರವಾಗಿ. ಇದಕ್ಕೆ ಇಂಗ್ಲಿಷಿನಲ್ಲಿ plagiarism ಅನ್ನುತ್ತಾರೆ. ಇಂಥ ಅನೇಕ ಕೇಸುಗಳನ್ನು ನಾವು ನೋಡುತ್ತಲೇ ಇರುತ್ತೇವೆ. ಕಳವು ಮಾಡುವುದೇ ಒಂದು 'ಧರ್ಮ'ವಾದಾಗ ಅಲ್ಲಿ ಸಾಮಾನಿನ ಆಯ್ಕೆ ಅಪ್ರಸ್ತುತ. ಇದನ್ನೇ ಕದಿಯ ಬೇಕು ಅದನ್ನೇ ಕದಿಯಬೇಕು ಎಂಬ ಮಡಿ-ಹುಡಿ ಬೇಕಾಗಿಲ್ಲ. ಇಡೀ ಕೃತಿಯನ್ನೇ ಕದಿಯಬಹುದು. ವಸ್ತುವನ್ನು, ಪಾತ್ರಗಳನ್ನು. ವರ್ಣನೆಗಳನ್ನು, ಸಂಭಾಷಣೆಗ ಳನ್ನು, ಪ್ರತಿಮೆಗಳನ್ನು. ಪ್ರಾಸಗಳನ್ನು...ಒಮ್ಮೊಮ್ಮೆ ಜೋಕುಗಳನ್ನೂ ... ಕದಿಯಬಹುದು. ಇಂಥ ಪ್ರಸಂಗಗಳಲ್ಲಿ ಕಾಯದೆ-ಕೋರ್ಟು ಅಂತ ಕೂಡ ಅಲೆ ದಾಡುವ ಅವಕಾಶವಿದೆ.

ಆದರೆ ಬಹುತೇಕ ಕೇಸುಗಳಲ್ಲಿ ಕೃತಿಚೌರ್ಯ ಶಬ್ದಕ್ಕೆ ಬದಲಾಗಿ ಕೃತಿಚೌರ ಎಂಬ ಶಬ್ದ ಬಳಸುವುದೇ ಹೆಚ್ಚು ಸಮಂಜಸ ಅಂತ ನನ್ನ ಅಭಿಪ್ರಾಯ. (ಈ 'ಕೃತಿಚೌರ' ಶಬ್ದ ನನ್ನ ಸ್ವಂತದ್ದೇ ಎಂಬ ನಂಬಿಕೆ ನನ್ನದು-ಸದ್ಯದ ಈ ಕ್ಷಣದ ವರೆಗೆ.) ಇಲ್ಲಿ, ಯಾವ ಮೂಲದಿಂದ ಏನನ್ನೇ ತಗೆದುಕೊಂಡರೂ ಅದನ್ನು ಅಲ್ಲಲ್ಲಿ ಅಷ್ಟಿಷ್ಟು ರಿಪೇರಿ ಮಾಡಿ ತಮ್ಮದೂ ಸ್ವಲ್ಪ ಕೈಗಂಟು ಸೇರಿಸಿ—ಇದನ್ನೇ ಸ್ವಲ್ಪ ಗಂಭೀರವಾಗಿ 'ಸಂಸ್ಕಾರಗೊಳಿಸಿ' ಅಂತ ಹೇಳಬಹುದು—ಅದಕ್ಕೊಂದು ಹೊಸ ವಿನ್ಯಾಸ ಕೊಡ ಲಾಗುತ್ತದೆ. ಕೆಲವರು ಮೂಲಕೃತಿಯನ್ನು 'ಬ್ಯೂಟಿ ಪಾರ್ಲರ್'ಗೇ ಒಯ್ದು ಆಮೂಲಾಗ್ರವಾಗಿ ಬದಲಾವಣೆ ಮಾಡುವ ಚಾಣಾಕ್ಷರಿದ್ದರೆ; ಇನ್ನು ಕೆಲವರು ಅಸರವಸರದಲ್ಲಿ ಹರಕಾಬರಕ ಹಜಾಮತಿ ಮಾಡಿ ಸಿಗಹಾಕಿ ಕೊಳ್ಳುವ ಹುಂಬ ರಾಗಿರುತ್ತಾರೆ. ಈ ಎರಡೂ ನಮೂನೆಗಳು ಕನ್ನಡದಲ್ಲಿ ಹೇರಳವಾಗಿವೆ.

ಜಿ. ಬಿ. ಜೋಶಿ ಎಂಬ ಹೆಸರಿನ 'ಜಡಭರತ'ರು ತಮ್ಮ 'ಕದಡಿದ ನೀರು' ನಾಟಕದ ಮೂಲವನ್ನು ಯಾರೋ ಸಾಕ್ಷಿ ಪುರಾವೆ ಸಮೇತ ಕದಡಿದಾಗ ಧರಿಸಿದ ಮೌನ ವ್ರತವನ್ನು ಇನ್ನೂ ಮುರಿದಿಲ್ಲ. ನಮ್ಮ ಪ್ರೀತಿಯ ಲಂಕೇಶ್ ತಮ್ಮದೊಂದು ಕಥಾ ಸಂಕಲನಕ್ಕಾಗಿ ಯಾವುದೋ ಇಂಗ್ಲಿಷ್ ಪುಸ್ತಕದ ಕವರು ಡಿಜೈನನ್ನೇ ಕದ್ದಿದ್ದರೆಂದು ಹಿಂದೆ-ಪತ್ರಿಕೆಗಳಲ್ಲಿ ಗುಲ್ಲಾಗಿತ್ತು. ಅನಂತಮೂರ್ತಿಯವರ 'ಮೌನ' ಎಂಬ ಕಥೆಯ ಉಗಮಸ್ಥಾನದ ಮೇಲೆ ಸುಮತೀಂದ್ರ ನಾಡಿಗರು ಸಾಕಷ್ಟು ಬೆಳಕು ಚಲ್ಲಿ ದ್ದರು. ಇತ್ತೀಚೆಗೆ ಬೆಂಗಳೂರಿನ 'ನಾಯ್‌ಸಳ' ಭಟ್ಟರೊಬ್ಬರು ಯುನಿವರ್ಸಿಟಿಯ ಪಬ್ಲಿಕೇಶನ್ನನ್ನೇ ತಮ್ಮ ಹೆಸರಿಗೆ ರೂಪಾಂತರಿಸಿಕೊಂಡ ಪವಾಡ ಚರ್ಚೆಗೆ ಗ್ರಾಸ ವಾಗಿದೆ.

ಇನ್ನೊಂದು ಬಗೆಯ ಕೃತಿಚೌರ ಅಂದರೆ–ಅದು ಇತಿಹಾಸದ ಕಾಲಗತಿಗೆ ಸಂಬಂಧಿಸಿದ್ದು. ಸಾರ್ವಜನಿಕ ನೆನಪು ಎಂಬುದು ಮಸುಕಾಗುತ್ತ ಹೋದಂತೆ, ಕೆಲವರು 'ಮುಸುಕಿದೀ ಮಬ್ಬಿನಲಿ' ಅನೇಕ ರೀತಿಯ ಕಾರುಭಾರು ಮಾಡುತ್ತಾರೆ. ಕಡಲ ತೀರದ ಭಾರ್ಗವನೆಂದು ಮಾತೃಹಂತಕ ಪರಶುರಾಮನ ಅಭಿಧಾನದಿಂದ ಲೋಕೋತ್ತರ ಖ್ಯಾತಿ ಪಡೆದ ಜ್ಞಾನಪೀಠ ಪ್ರಶಸ್ತಿ ವಿಜೇತ ಶಿವರಾಮ ಕಾರಂತರು ಅನೇಕ ದಶಕಗಳ ಹಿಂದೆ ಶ್ರೀ ಬೆಂಗೇರಿ ಹುಚ್ಚರಾಯರ ಜೊತೆಗೂಡಿ ಒಂದು ಪುಸ್ತಕದ ಸಂಪಾದನೆ ಮಾಡಿದರಂತೆ. ಆ ಪುಸ್ತಕದ ಇತ್ತೀಚಿನ ಆವೃತ್ತಿಗಳಲ್ಲಿ–ಅಂದರೆ ಬೆಂಗೇರಿಯವರು ಕಾಲಗರ್ಭ ಸೇರಿದ ನಂತರದಲ್ಲಿ—'ಸಂಪಾದಕ'ರೆಂದು ಕಾರಂತರ ಹೆಸರೊಂದೇ ರಾರಾಜಿಸುತ್ತಿದೆಯಂತೆ. ಪಾಟೀಲ ಪುಟ್ಟಪ್ಪನವರು 'ದೊಡ್ಡವರ ಸಣ್ಣತನ'ದ ಒಂದು ಸಣ್ಣ ಉದಾಹರಣೆಯಾಗಿ ಈ ಕತೆ ಆಗಾಗ ಹೇಳುತ್ತಾರೆ. ಇದಕ್ಕಿಂತ ಸ್ವಾರಸ್ಯಕರವಾದ ಪ್ರಸಂಗವೊಂದು ನಮ್ಮ ಕಂಬಾರರ ಸುತ್ತ ದಂತಕತೆಯಂತೆ ಹೆಣೆಯಲ್ಪಟ್ಟಿದೆ.

**ಸಂಗ್ಯಾ ಬಾಳ್ಯಾ** ಉತ್ತರ ಕರ್ನಾಟಕದ ಪ್ರಸಿದ್ಧ ದೊಡ್ಡಾಟ. ಬೈತಲವಾಡದ ಪತ್ತಾರ ಮಾಸ್ತರರ ಆಟವೆಂದೇ ಅದರ ಪ್ರಖ್ಯಾತಿ. ಇತ್ತೀಚಿನ ವರ್ಷಗಳಲ್ಲಿ ಈ ದೊಡ್ಡಾಟವನ್ನು ಸಂಸ್ಕಾರಗೊಳಿಸಿ ಗೊಳಿಸಿ ಗೊಳಿಸಿ ಮತ್ತಷ್ಟು ಜನಪ್ರಿಯ ಮಾಡಿದವರು ಚಂದ್ರಶೇಖರ ಕಂಬಾರ...ಇಂಥ ಕಂಬಾರರು ಇಂಗ್ಲಿಷ್ ಪತ್ರಿಕೆಯೊಂದಕ್ಕೆ ಕೊಟ್ಟ ಸಂದರ್ಶನದಲ್ಲಿ "ನನ್ನ ಸಂಗ್ಯಾ ಬಾಳ್ಯಾ, ನನ್ನ ಸಂಗ್ಯಾ ಬಾಳ್ಯಾ" ಎಂದು ಹೇಳಿದ್ದರಂತೆ. ಆ ಪತ್ರಿಕೆಯ ಸಮೇತ ಗೆಳೆಯ ಸಿದ್ಧಲಿಂಗ ಪಟ್ಟಣಶೆಟ್ಟಿ ಅವರು ಒಮ್ಮೆ ನನ್ನ ಬಳಿ ಬಂದಿದ್ದರು. ಈ ಮಾಹಿತಿಯನ್ನು ಅವರಿಗೆ ಪೂರೈಸಿದವರು, ಜಾನಪದ ಸಾಹಿತ್ಯ ಸಂಗ್ರಹವನ್ನು ಒಂದು ಪ್ರೀತಿಯ ಕಾಯಕವನ್ನಾಗಿ ಕೈಕೊಂಡ ಚಿಗಟೇರಿಯ ಮುದೇನೂರ ಸಂಗಣ್ಣನವರು. ಒಂದೆರಡು ಸಭೆಗಳಲ್ಲಿ ಪಟ್ಟಣಶೆಟ್ಟರು ಇದನ್ನು ಉಲ್ಲೇಖಿಸಿ ಕಂಬಾರರನ್ನು (ಅವರ ಗೈರು ಹಾಜರಿಯಲ್ಲಿ) ಝಾಡಿಸಿದ್ದರಂತೆ. ಕಂಬಾರರ ಬರಹಕ್ಕಿಂತ ಹೆಚ್ಚಾಗಿ ಅವರ ಬದುಕನ್ನು ಸೂಕ್ಷ್ಮವಾಗಿ ಗಮನಿಸುತ್ತಾ ಬಂದಿರುವ ನನಗೆ ಇದೇನೂ ವಿಶೇಷ ಅನ್ನಿಸಲಿಲ್ಲ. 'ಪತ್ತಾರ' ಮಾಸ್ತರರೂ 'ಕಂಬಾರ'ರೂ ಕುಲಬಾಂಧವರಾದ್ದರಿಂದ 'ಆ ಮಾಸ್ತರರು ನಮ್ಮ ಅಜ್ಜ, ಅಥವಾ ಮುತ್ತಜ್ಜ. ಅವನಿಗೆ ನಾನೇ ವಾರಸುದಾರ' ಎಂದು ಕಂಬಾರರು ವಾದಿಸಿ, ಕಾಗದ ಪತ್ರ ಸಾದರಪಡಿಸಲೂಬಹುದು. ಅಥವಾ ಜಾನಪದರ ನಂಬುಗೆಯನ್ನು ಆಧರಿಸಿ, ನಮ್ಮ ಪುಟ್ಟಪರ್ತಿಯ ಬುರಡಿ ಸಾಯಿಬಾಬಾ ತಾನು ಆ ಶಿರಡಿ ಸಾಯಿಬಾಬಾನ 'ಅವತಾರ' ಎನ್ನುವಂತೆ, "ನಾನು ಪತ್ತಾರ ಮಾಸ್ತರನ ಅವತಾರ" ಎಂದೂ ವಾದಿಸಬಹುದು. ಆದಿರಲಿ. ಕನ್ನಡ ವಾಚಕ ಮತ್ತು ಪ್ರೇಕ್ಷಕ ವೃಂದ ಕಂಬಾರರಿಗೆ ಕೃತಜ್ಞತೆ ಹೇಳಬೇಕಾ

ದುದು ಯಾವುದಕ್ಕೆ ಅಂದರೆ, ಅವರಿನ್ನೂ, "ನಾನೇ ಸಂಗ್ಯಾ, ಅಥವಾ ನಾನೇ ಬಾಳ್ಯಾ" ಅಂತ ಹೇಳಲು ಪ್ರಾರಂಭಿಸಿಲ್ಲ !

ಕರ್ನಾಟಕ ವಿಶ್ವವಿದ್ಯಾಲಯದ ಕ. ಅ. ಪೀಠದ ಜಾನಪದ ಕುರಿತ ಕಾರ್ಯಕ್ರಮವೊಂದರಲ್ಲಿ ಒಮ್ಮೆ ಕಂಬಾರರು ಭಾಷಣ ಮಾಡುತ್ತ, ಜಾನಪದ ಸಾಹಿತ್ಯದ ಕೃತಿಗಳಿಗೂ ಕಾಪಿರೈಟ್ ಕಾನೂನು ಅನ್ವಯಿಸಬೇಕೆಂಬ ಪಾಶ್ಚಾತ್ಯರ ಇತ್ತೀಚಿನ ವಾದ ಸರಣಿಯನ್ನು ಅತ್ಯಂತ ಕಟುವಾದ ಶಬ್ದಗಳಲ್ಲಿ ಶೋಚನೀಯವಾಗಿ ಖಂಡಿಸುತ್ತಿದ್ದರು. ನನಗೆ ಅಚ್ಚರಿಯಾಗತೊಡಗಿತ್ತು. ಯಾವಾಗಲೂ ಎಲ್ಲರಿಗೆ ಬೇಕಾದವನಾಗಿ; ಎಲ್ಲ ಕಡೆಯೂ ಸಲ್ಲುವವನಾಗಿ; ಗೆಳೆಯರ ಜೋಕುಗಳಿಗೆ, ಅರ್ಥವಾಗದಿದ್ದರೂ ಅಡ್ಡಾನ್ಸಾಗಿ ಗಹಗಹಿಸಿ ನಕ್ಕು, ಅವರನ್ನು ಸಂಪ್ರೀತಗೊಳಿಸುವವನಾಗಿ; ಕುಶಲ ಕರ್ಮಿ 'ಕಮ್ಮಾರ'ನಂತೆ ಎಲ್ಲಿ ಯಾರನ್ನು ಹೇಗೆ ಕಾಯಿಸಬೇಕು ಯಾವಾಗ ಬಡಿಯಬೇಕು ಎಂಬ ಜೀವನ-ಕಲೆಯನ್ನು ಕರಗತ ಮಾಡಿಕೊಂಡವನಾಗಿ ಬದುಕುತ್ತಿರುವ ಈ ಗೆಳೆಯನಿಗೆ ಏನಾಗಿದೆ ! ಅಂತ ಚಿಂತಿಸುತ್ತಿದ್ದಾಗ, ಒಮ್ಮೆಲೇ ನನಗೆ ಜ್ಞಾನೋದಯವಾಯಿತು. ಜಾನಪದಕ್ಕೂ ಕಾಪಿರೈಟ್ ಬಂದರೆ ಕಂಬಾರರಂಥವರು ಆಜೀವ ಕಾರಾಗೃಹವಾಸಿ ಆಗಿರಬೇಕಾಗುತ್ತದೇನೋ! ಏಕೆಂದರೆ ಅವರ ನಾಟಕ, ಸಿನಿಮಾದ ಹಾಡುಗಳು ಕಥೆಗಳು ಹಾಡಿನ ಲಯಗಳು ಜಾನಪದದ ಮೂಲದಿಂದಲೇ ಕೊಳ್ಳೆ ಹೊಡೆದಂಥವು ಎಂಬ ಬಗ್ಗೆ ಅನೇಕ ಕಥೆಗಳು ಚಾಲ್ತಿಯಲ್ಲಿವೆ.

ಬೇಂದ್ರೆ ಅವರ ಬಗ್ಗೆಯೂ ಅಂಥ ಕಥೆಗಳಿವೆ. ಸೋಮಶೇಖರ ಇಮ್ರಾಪೂರ ಆಗಾಗ ಈ ಮಾತು ಮೆಲುಕಾಡಿಸುತ್ತಾರೆ. ಸುಮತೀಂದ್ರ ನಾಡಿಗರಂತೂ ಒಂದು ಕಾಲಕ್ಕೆ 'ಮೂಲ'ಕ್ಕೆ ಕೈ ಹಾಕುವುದನ್ನೇ ತಮ್ಮ ಕಾಯಕ ಮಾಡಿಕೊಂಡಿದ್ದರು. (ಅವರಿಗೆ ಪ್ರೀತಿಯಿಂದ ನಾನು 'ಮೂಲವ್ಯಾಧಿ ವಿಮರ್ಶಕ' ಅಂತ ಕರೆಯುತ್ತಿದ್ದೆ), ಅವರೊಬ್ಬ ಬೇಂದ್ರೆ-ಸ್ಪೆಶಲಿಸ್ಟ್. ಈಗೇನೋ ಅಡಿಗರ ಹೆಸರಿನದೊಂದು ಟ್ರಸ್ಟ್ ಮಾಡಿಕೊಂಡು ಬದುಕಲು ಪ್ರಯತ್ನಿಸುತ್ತಿದ್ದಾರೆ. ಈ ಬಗ್ಗೆ ಬೇಂದ್ರೆಯವರನ್ನು ಸುತ್ತುವರೆದ ಒಂದು ಪ್ರಸಂಗ ಹೀಗಿದೆ: ಬೇಂದ್ರೆಯವರ ಬಾಗಿಲು ಕಟ್ ಕಟ್ ಅಂದಾಗ ಕವಿಗಳು ಬಾಗಿಲು ತಗೆದರಂತೆ. ವ್ಯಕ್ತಿಯೊಬ್ಬ ಕೈ ಮುಗಿದು ನಿಂತಿದ್ದನಂತೆ.

ಬೇಂದ್ರೆ : ಯಾರು ನೀವು ?
ವ್ಯಕ್ತಿ : (ಮೈಸೂರಿ ಶೈಲಿಯಲ್ಲಿ) ನಾಡಿಗ್.
ಬೇಂದ್ರೆ : ನಾಡಿಗ್ ? ... ಯಾವ ನಾಡಿಗ್ !
ವ್ಯಕ್ತಿ : ಸುಮತೀಂದ್ರ ನಾಡಿಗ್

ಬೇಂದ್ರೆಯವರು ವ್ಯಕ್ತಿಯನ್ನು ಅಡಿಯಿಂದ ಮುಡಿವರೆಗೆ, ಮತ್ತೆ ಮುಡಿಯಿಂದ ಅಡಿವರೆಗೆ ನೋಡಿ, ಭಕ್ತಿಯಿಂದ ಕೈಜೋಡಿಸಿ, ದೊಪ್ಪನೇ ಬಾಗಿಲ ಹಾಕಿ

ಕೊಂಡು ಒಳ ಹೋದವರಂತೆ! ನಮ್ಮ ಸುಮತೀಂದ್ರ 'ಬಾಗಿಲೊಳು ಕೈಮುಗಿದು' ಅದೇ ಪೋಜಿನಲ್ಲಿ ಒಂದು ಕ್ಷಣ ನಿಂತು, ವರಕವಿಯ ಯಥಾ ಪ್ರಕಾರದ ಚಿಟಿಗೆ ಸಕ್ಕರೆ ನಾಕು ಫುಟಾಣಿಯ ಪ್ರಸಾದವಿಲ್ಲದೆ, ಮರಳಿದರಂತೆ!

ಇದೇ ಪ್ರಕಾರ, ನಮ್ಮ ಕಂಬಾರ ಕೂಡ ಪಟ್ಟಣಶೆಟ್ಟಿಯವರ ಬಗ್ಗೆ ತಮ್ಮದೇ ಆದ ವಿಶಿಷ್ಟ ರೀತಿಯ ಜಾನಪದ ಸೊಗಡಿನ 'ಕುವಸು' ಇಟ್ಟಿದ್ದಾರೆಂದು ಅವರ ಆಪ್ತವಲಯದಿಂದ ನನಗೆ ವಿಶ್ವಸನೀಯವಾಗಿ ತಿಳಿದು ಬಂದಿದೆ.



'ಕೃತಿಚೌರ್ಯ' ಅಥವಾ 'ಕೃತಿಚೌರ' ಎಂಬುದು ಕೇವಲ ಕವಿ, ನಾಟಕಕಾರ, ಕಾದಂಬರಿಕಾರ ಮುಂತಾದ ಸೃಜನಶೀಲರಿಗೆ ಮಾತ್ರ ಸೀಮಿತವಾಗಿ ಉಳಿದಿಲ್ಲ. ಅಭಿವೃದ್ಧಿಶೀಲತೆಯೇ ಕಾಲ ಧರ್ಮವಾಗಿರುವ ಈ ದಿನಮಾನದಲ್ಲಿ ಅದೂ ತನ್ನ ಕ್ಷಿತಿಜವನ್ನು ವಿಸ್ತರಿಸಿಕೊಳ್ಳುತ್ತಲೇ ಇದೆ. ವಿಮರ್ಶಕರು ಈ ಕೆಲಸಕ್ಕೆ ಕೈ ಹಚ್ಚಿದಾಗ ಅವರು ವಿಚಾರ-ವಲಯಗಳ ವಿಹಾರಿಗಳಾದ್ದರಿಂದ, ಸಿಕ್ಕಿ ಹಾಕಿಕೊಳ್ಳುವುದು ಕಡಿಮೆ. ...ಇತ್ತೀಚೆಗೆ ನಮ್ಮ ಕೆಲ ವಿಮರ್ಶಕರಿಗೆ, ಅವರಿವರ ಖರ್ಚಿನಲ್ಲಿ ವಿದೇಶ-ದರ್ಶನದ ಯೋಗ ಲಭಿಸುತ್ತಿರುವುದರಿಂದ, ಅವರು ಅಲ್ಲಿ ಮಾತ್ರ ಲಭ್ಯವಿರುವ ಆಧುನಿಕ ಜ್ಞಾನ ಪ್ರಪಂಚದ ಕೆಲವು ಹೊಳವುಗಳನ್ನು ಅಷ್ಟಿಷ್ಟು ಕಿಸೆಯಲ್ಲಿ ಹಾಕಿಕೊಂಡು ಬರುವುದೂ ಉಂಟು. ಜ್ಞಾನ ಪ್ರಸಾರದ ಈ ಕ್ರಿಯೆ ಸಹಜ ಮತ್ತು ಅನಿವಾರ್ಯ. ಕುವೆಂಪು ಹೇಳಿದಂತೆ, ಈ ಸಾಹಿತ್ಯ ಲೋಕದಲ್ಲಿ ಒಬ್ಬನ ಕೈ ಇನ್ನೊಬ್ಬನ ಜೇಬಿನಲ್ಲಿ. (ಇಷ್ಟೇ: ಆ ಇನ್ನೊಬ್ಬನ ಕೈ ಕೂಡ ನನ್ನದೇ ಕೈ ಎಂಬ ಆತ್ಮೀಯತೆಯ ಜೊತೆಗೆ, ಪ್ರಸಂಗ ಬಂದರೆ ಆ ಕೈ ಕಡಿದು ತನ್ನ ಮೈಗೆ ಕಸಿ ಮಾಡಿಕೊಳ್ಳುವ ಭಂಡ ಧೈರ್ಯ ವಿದ್ದರೆ ಸಾಕು. ಯಾರಿಗೂ ಹೆದರಬೇಕಾಗಿಲ್ಲ.)

ಇತ್ತೀಚಿನ ವರ್ಷಗಳಲ್ಲಿ ಡಿ. ಆರ್. ನಾಗರಾಜ, (ಆಪ್ತವಲಯದಲ್ಲಿ 'ಡಿರಂ' ಎಂದೇ ಪರಿಚಿತರು; 'ಕಿರಂ'ಗೆ ಪ್ರಾಸವಾಗಿ.) ನಮ್ಮ ಗಂಭೀರ ವಿಮರ್ಶಕರಲ್ಲೊಬ್ಬರೆಂದು ಬೆಂಗಳೂರಿನ ಸುತ್ತ ಮುತ್ತಲೂ ಜಗತ್ ಪ್ರಸಿದ್ಧರಾಗಿದ್ದಾರೆ. ಅವರ 'ಗಾಂಭೀರ್ಯ'ಕ್ಕೆ ಅವರ ಸ್ವರ ಪಟಲದ **ಗಾಂಭೀರ್ಯವೇ** ಕಾರಣವೆಂದು ಅವರ ವೈರಿಗಳೂ. ಅವರ **ಗಾಂಭೀರ್ಯವೂ** ಕಾರಣವೆಂದು ಅವರ ಸ್ನೇಹಿತರೂ ವಾದಿಸುತ್ತಾರೆ. ಸತ್ಯ ಎಲ್ಲೋ ಎರಡರ ನಡುವೆ ಇದೆ – ಅವರ ಗಂಟಲಲ್ಲ. ಇರಲಿ. ಇಂಥಾ ಡಿರಂ ಅವರು ಮೈಸೂರಿನ ಸಂಕಿರಣವೊಂದರಲ್ಲಿ ಯಾವುದೋ ವಿಷಯದ ಬಗ್ಗೆ ಗಂಭೀರವಾಗಿ ಒಂದೆರಡು ತಾಸು ಮಾತಾಡಿ ಸಭಿಕರನ್ನು ತಲ್ಲಣಗೊಳಿಸಿದ್ದರಂತೆ. ('ತಲ್ಲಣ'– ಅವರ ಪ್ರೀತಿಯ ಶಬ್ದ ) ಆಗ, ಸಂಶೋಧನೆ ಮಾಡುತ್ತಿದ್ದ ವಿದ್ಯಾರ್ಥಿನಿಯೊಬ್ಬರು ಎದ್ದುನಿಂತು-

"ನಾಗರಾಜ್ ಅವರೇ, ನೀವು ಹೇಳಿದ ವಿಚಾರಗಳು ಹೊಚ್ಚ ಹೊಸವು," ಅಂದಾಗ ಡಿರಂ ಗಡ್ಡದ ನಡುವೆಯೂ ಮಿಂಚಿನಂತೆ ನಸು ನಕ್ಕರಂತೆ. ವಿದ್ಯಾರ್ಥಿನಿ ಮುಂದು ವರೆದು,

"ಆದರೆ..." (ಪಾಶ್ಚಾತ್ಯ ಹೆಸರೊಂದನ್ನು ಉಚ್ಚರಿಸಿ) "ಈ ವಿಮರ್ಶಕರ ಪುಸ್ತಕದ ಮೊದಲ ಎರಡು ಚಾಪ್ಟರಗಳ ವಿಚಾರ ಮಾತ್ರ ಹೇಳಿದಿರಿ, ಮೂರನೇ ಚಾಪ್ಟರಿನ ವಿಚಾರ ಹೇಳಲಿಲ್ಲವೇಕೆ ?" ಅಂದರಂತೆ!

ಈ ಪ್ರಸಂಗವನ್ನು ಹಾಮಾನಾ ಅವರು ತಮ್ಮದೇ ಆದ ತಟಸ್ಥ ಮನೋಭಾವದಲ್ಲಿ ಹೇಳಿದ್ದು ನನಗಿನ್ನೂ ನೆನಪಿದೆ.

ಇಡೀ ಹಡಗವನ್ನೇ ನುಂಗಿ ದಕ್ಕಿಸಿ ಕೊಳ್ಳುವವರು ಇರುವಾಗ ಸಣ್ಣ ಸಣ್ಣ ಬೋಟು ಗಳನ್ನೋ ಅವುಗಳ 'ಹುಟ್ಟು' ಗಳನ್ನೋ ಕದಿಯುವುದು ಅಂಥ ದೊಡ್ಡ ಅಪರಾಧ ವೇನೂ ಅಲ್ಲ. ಆದರೆ ಇಂಥಲ್ಲಿ ಬೇಕಾಗಿರುವುದು ಪ್ರಾಮಾಣಿಕತೆ – ಅದೂ ತೀರ ಸಣ್ಣ ಪ್ರಮಾಣದ್ದು. ಕೋಟ್ ಮಾಡುವಾಗ ಇದು ಇಂಥವರದು ಅಂತ ಹೇಳಿ ಬಿಟ್ಟರೆ ಸಾಕು..... ಆದರೆ ನಮ್ಮ ಅನೇಕ ಉದ್ದಾಮರಿಗೆ ಇದು ಬೇಕು ಅನಿಸುವು ದಿಲ್ಲ.

●

ಕಾರ್ನಾಡರ 'ಚೆಲುವಿ'ಯಲ್ಲಿ ಈ ಪ್ರಶ್ನೆ ಏಳುವುದಿಲ್ಲ. ಹಾಗೇ ಅವರ ಈವರೆಗಿನ ನಾಟಕಗಳಲ್ಲಿ ಅತ್ಯುತ್ತಮ ಎನ್ನಬಹುದಾದ 'ತುಘಲಕ' ಓದಿದಾಗ ಕಮೂನ 'ಕಲಿ ಗುಲ' ನೆನಪಾಗುತ್ತದೆ. (ಅಥವಾ 'ಕಲಿಗುಲ' ಓದುವಾಗ 'ತುಘಲಕ' ನೆನಪಾಗು ತ್ತದೆ!) ಅವೆರಡರ ಯಶಸ್ಸಿನಲ್ಲಿ ಅಜಗಜಾಂತರವಿದ್ದರೂ, ಕನ್ನಡದ ಮಟ್ಟಿಗೆ 'ತುಘಲಕ' ಉತ್ತಮ ನಾಟಕವೇ.... ಗಿರೀಶರದು ಒಂದು ರೀತಿಯಲ್ಲಿ ರೂಪಾಂತರ-ಪ್ರತಿಭೆ. ಒಂದು ಸಿದ್ಧ ವಸ್ತುವನ್ನು ಕಾಲಕ್ಕೆ ಹಾಗೂ ಸಮಯಕ್ಕೆ ತಕ್ಕಂತೆ ತೃಪ್ತಿಕ ರವಾಗಿ ರೂಪಾಂತರಿಸುವ ಸಮಕಾಲೀನ ಮತ್ತು ಸಮಯೋಚಿತ ಪ್ರಜ್ಞೆ ಅವರ ಯಶಸ್ಸಿಗೆ ಯಾವಾಗಲೂ ಸಹಾಯಕಾರಿಯಾಗಿ ಕೆಲಸ ಮಾಡಿದೆ: 'ಹಯವದನ', 'ತಲೆದಂಡ' ಮುಂತಾದವುಗಳಲ್ಲಿ ತೇಪೆ ಹಚ್ಚುವ ಕೆಲಸ ಒಡೆದು ಕಾಣುವಂತೆ ಇದ್ದರೂ, 'ತುಘಲಕ' 'ಚೆಲುವಿ' ಮುಂತಾದ ಕಡೆಯಲ್ಲಿ 'ಸಂಸ್ಕಾರ'ದ ಕೆಲಸ ಚೊಕ್ಕಾಟವಾಗಿ ನಡೆದಿದೆ.

ಮನುಷ್ಯನ ಮೂಲ ಪ್ರವೃತ್ತಿಗಳ ಸೆಳೆತವನ್ನೂ, ಅದರಾಳದ ದುರಂತವನ್ನೂ, ಆ ದುರಂತದಾಳದ ಆಶಾಭಾವನೆಯನ್ನೂ ಸಮರ್ಪಕವಾಗಿ ಅಭಿವ್ಯಕ್ತಿಸುವ 'ಚೆಲುವಿ'ಗೆ

ಪರಿಸರ ರಕ್ಷಣೆಗೆ ಸಂಬಂಧಪಟ್ಟ ಯಾವುದೋ ಒಂದು ರಾಷ್ಟ್ರೀಯ ಪ್ರಶಸ್ತಿ' ದೊರೆತದ್ದು ಒಂದು ವ್ಯಂಗ್ಯವೆಂದೇ ಹೇಳಬೇಕು. .... ಆದರೆ ನಮ್ಮ ಕೆಲವು ಸಾಹಿತಿಗಳು ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಈ ವರ್ಷ ಯಾವ ಪ್ರಕಾರಕ್ಕೆ ಬರಬಹುದೆಂದು ಲೆಕ್ಕ ಹಾಕಿಯೇ, (ಕೋರ್ಟಿನಲ್ಲಿ ಫೇವರಬಲ್ ಬೆಂಚ್‌ಗಾಗಿ ಕಾದ ವಕೀಲರಂತೆ). ಆವಕ್ಕೆ ತಕ್ಕಂಥ ಪುಸ್ತಕ ಪ್ರಕಟಿಸುತ್ತಾರೆಂದು ಕೇಳಿರುವೆ. ಇದನ್ನೇ ರಾಷ್ಟ್ರ ಮಟ್ಟದಲ್ಲಿ ಗಿರೀಶ ಕಾರ್ನಾಡರಂಥವರು ಮಾಡಿದ್ದರೆ ಅದು ತಪ್ಪು ಅಂತ ಹೇಗೆ ಹೇಳಲು ಸಾಧ್ಯ? ...ಕೆಲವು ರಾಷ್ಟ್ರೀಯ "ಪ್ರಶಸ್ತಿ"ಗಳು ಖಾಲಿ ಉಳಿಯುವಂತೆ ಮಾಡಿದರೆ ಅದು ರಾಷ್ಟ್ರ ವಿರೋಧಿ ಕೃತ್ಯವಾಗುವುದಿಲ್ಲವೇ ?

●

# ಕಥನ ಶಾಸ್ತ್ರ (Narratology)

ಸಿ. ಎನ್. ರಾಮಚಂದ್ರನ್

## ಭಾಗ: ಒಂದು

ರಸ, ಧ್ವನಿ, ವಕ್ರೋಕ್ತಿ, ಔಚಿತ್ಯ– ಇವೇ ಮುಂತಾದ ಸೋಪಜ್ಞ ಪರಿಕಲ್ಪನೆಗಳನ್ನು ಜಗತ್ತಿಗಿತ್ತ ಭಾರತೀಯ ಕಾವ್ಯ ಮೀಮಾಂಸೆ ಕಥನ ಶಾಸ್ತ್ರಕ್ಕೆ–ಎಂದರೆ, ಕಥನ ಕಲೆಯ ವಿಶ್ಲೇಷಣೆಗೆ–ಏಕೆ ಅಷ್ಟಾಗಿ ಗಮನಕೊಡಲಿಲ್ಲ, ಗೊತ್ತಾಗುವುದಿಲ್ಲ. ಅನೇಕಾನೇಕ ಅದ್ಭುತ ಕಥಾನಕಗಳು (narratives) ಸಂಸ್ಕೃತದಲ್ಲಿದ್ದರೂ ಪ್ರಾಯಶಃ ಭಾರತೀಯ ಲಾಕ್ಷಣಿಕರು ನಾಟಕ ಹಾಗೂ ಮಹಾಕಾವ್ಯ ಇವೆರಡೂ ಸಾಹಿತ್ಯ ಪ್ರಭೇದಗಳನ್ನೇ ಯಾವಾಗಲೂ ಮುಖ್ಯವೆಂದು ಪರಿಗಣಿಸುತ್ತಿದ್ದುದರಿಂದ ಇತರ ಪ್ರಭೇದಗಳು ಅವರ ನಿರ್ಲಕ್ಷಕ್ಕೆ ಒಳಗಾಗಿರಬೇಕು.

ಹಾಗೆಂದ ಮಾತ್ರಕ್ಕೆ ಗದ್ಯ/ಪದ್ಯ ಕಥಾನಕಗಳನ್ನು ಭಾರತೀಯ ಲಾಕ್ಷಣಿಕರು ಉಲ್ಲೇಖಿಸುವುದೇ ಇಲ್ಲ ಎಂದಲ್ಲ. ಮೊತ್ತಮೊದಲಿಗೆ ಕಾತ್ಯಾಯನನು ಗದ್ಯ ಕಾವ್ಯದಲ್ಲಿ 'ಕಥಾ' ಮತ್ತು 'ಆಖ್ಯಾಯಿಕಾ' ಎಂಬ ಎರಡು ಉಪಪ್ರಭೇದಗಳನ್ನು ಗುರುತಿಸಿದ ನಂತರ 'ಅಗ್ನಿ ಪುರಾಣವು' ಇವೆರಡು ಉಪಪ್ರಭೇದಗಳ ಲಕ್ಷಣಗಳನ್ನು ಸಾಕಷ್ಟು ದೀರ್ಘವಾಗಿ ಚರ್ಚಿಸುತ್ತದೆ. ಇವೆರಡರ ನಡುವೆ ಕಂಡುಬರುವ ಒಂದು ಮುಖ್ಯ ವ್ಯತ್ಯಾಸವೆಂದರೆ 'ಆಖ್ಯಾಯಿಕೆಯ ನಿರೂಪಕ ಅದರ ನಾಯಕ; ಆದರೆ ಕಥೆ ನಾಯಕನನ್ನು ಹೊರತುಪಡಿಸಿ ಇತರರಿಂದ ನಿರೂಪಿಸಲ್ಪಡುತ್ತದೆ' ಎಂಬ ಅಂಶ. ಹೀಗೆ 'ಈ ಕಥಾನಕದ ನಿರೂಪಕನು ಯಾರು ?' ಎಂಬ ಮುಖ್ಯ ಪ್ರಶ್ನೆಯನ್ನು–ಕಥನ ಶಾಸ್ತ್ರಕ್ಕೆ ಅತೀ ಮುಖ್ಯವಾಗುವ ನಿರೂಪಕನ ಪ್ರಶ್ನೆಯನ್ನು–ಅಗ್ನಿ ಪುರಾಣವು ಎತ್ತಿದರೂ ಅನಂತರ ಬರುವ ಲಾಕ್ಷಣಿಕರು ಈ ದಿಕ್ಕಿನಲ್ಲಿ ಮುಂದುವರಿಯುವದಿಲ್ಲ. ಏಳನೇ ಶತ

ಮಾನದ ದಂಡಿ, ಕಥೆಗೂ ಆಖ್ಯಾಯಿಕೆಗೂ ಏನೂ ವ್ಯತ್ಯಾಸವಿಲ್ಲವೆಂದು ವಾದಿಸಿದರೆ ಆನಂದವರ್ಧನ, ಭೋಜ ಮುಂತಾದವರು ಕೇವಲ ಗದ್ಯ ಕಾವ್ಯದ ಉಪಪ್ರಭೇದ ಗಳನ್ನು ಹೆಸರಿಸುತ್ತಾರೆ-ಚರ್ಚಿಸುವುದಿಲ್ಲ.

ಆನಂದ ವರ್ಧನನು 'ಪರ್ಯಾಯ ಬಂಧ' 'ಪರಿಕಥಾ' 'ಖಂಡಕಥಾ' ಮತ್ತು 'ಸಕಲ ಕಥಾ' ಎಂಬ ಪ್ರಭೇದಗಳನ್ನು ಹೆಸರಿಸಿದರೆ, ಭೋಜನು ಇವುಗಳಲ್ಲದೆ 'ಉಪಾಖ್ಯಾನ,' 'ಆಖ್ಯಾನ.' 'ನಿದರ್ಶನ,' 'ಮಂಥುಲ್ಲಿ' ಮತ್ತು 'ಮಣಿಕುಳ್ಯ' ಎಂಬ ಪ್ರಭೇದಗಳನ್ನು ಪಟ್ಟಿ ಮಾಡುತ್ತಾನೆ. ಆದರೆ ಅವುಗಳ ನಿದರ್ಶನಗಳನ್ನಾಗಲೀ, ಲಕ್ಷಣಗಳನ್ನಾಗಲೀ ಕೊಡುವುದಿಲ್ಲ.

ಆದರೆ ಪಾಶ್ಚಾತ್ಯ ಕಾವ್ಯ ಮೀಮಾಂಸೆಯಲ್ಲಿ, ವಿಶೇಷತಃ ೨೦ನೇ ಶತಮಾನದಲ್ಲಿ ಕಥನ ಶಾಸ್ತ್ರ ಅತ್ಯಂತ ಆಳವಾಗಿ, ಅದ್ಭುತವಾಗಿ ಬೆಳೆದಿದೆ. ಪಾಶ್ಚಾತ್ಯ ಕಥನ ಶಾಸ್ತ್ರದ ಇತಿಹಾಸದಲ್ಲಿ ಸ್ಥೂಲವಾಗಿ ನಾವು ಇವುಗಳನ್ನು ಪ್ರಮುಖ ಘಟ್ಟಗಳೆಂದು ಗುರುತಿಸಬಹುದು:

(೧) ರಶ್ಯನ್ ರೂಪನಿಷ್ಠ ಚಿಂತಕರು (೨) ಶಿಕಾಗೋ ವಿಮರ್ಶಕರು
(೩) ರಾಚನಿಕೋತ್ತರ ಚಿಂತಕರು.

ಈಗ ಒಂದೊಂದಾಗಿ ಈ ಘಟ್ಟಗಳ ಪ್ರಮುಖ ಚಿಂತನೆಯನ್ನು ನೋಡೋಣ.

## (೧) ರಶ್ಯನ್ ರೂಪನಿಷ್ಠ ಚಿಂತನೆ

ರಶ್ಯನ್ ಮಹಾಕ್ರಾಂತಿಗೆ ಹಿಂದಿನೆರಡು ದಶಕಗಳಲ್ಲಿ ವ್ಯಾಪಕವಾಗಿ ಬೆಳೆದಿದ್ದ ರೂಪ ನಿಷ್ಠ ಪ್ರಸ್ಥಾನದಲ್ಲಿ ಅತೀ ಮುಖ್ಯನಾದವನೆಂದರೆ ವಿಕ್ಟರ್ ಶ್ಲಾವ್‌ಸ್ಕಿ(VIKTOR SHKLOVSKY). ಕಥನ ಕಲೆಯ ವಿಶ್ಲೇಷಣೆಗೆ ಇವನ ಕೊಡುಗೆ ಮೌಲಿಕ. ಒಂದು ಕಥಾನಕದಲ್ಲಿ 'ಕಥೆ' ಬೇರೆ-ಅದರ 'ಸಂವಿಧಾನ' ಬೇರೆ (Story and Plot) ಎಂಬುದು ಶ್ಲಾವ್‌ಸ್ಕಿಯ ಮೂಲಭೂತ ಪರಿಕಲ್ಪನೆ. 'ಕಥೆ' ಲೇಖಕನಿಂದಾ ಗುವ ಸೃಷ್ಟಿಯನ್ನು ಕಾಯುತ್ತಿರುವ ಒಂದು ಕಚ್ಚಾ ವಸ್ತು ಅಷ್ಟೇ. 'ಕಥೆಯೇನು?' ಎಂಬುದು ಸಾಹಿತ್ಯಿಕ ಪ್ರಶ್ನೆಯಲ್ಲ-ಆದರೆ 'ಸಂವಿಧಾನ' ಎಂಬುದು ಸಾಹಿತ್ಯದ ಪರಿಧಿಯೊಳಗೆ ಬರುವಂತಹದು. ಸಂವಿಧಾನವೆಂದರೆ ಬಿಡಿಘಟನೆಗಳ ಒಂದು ವಿಶಿಷ್ಟ ಜೋಡಣೆ. ಆದರೆ ಅಷ್ಟೇ ಅಲ್ಲ (ಮುಂದೆ ಬರುವ ಇ. ಎಂ. ಫಾರ್‌ಸ್ಟರ್ ಈ ಘಟ್ಟ ದಲ್ಲಿಯೇ ನಿಂತು ಬಿಡುತ್ತಾನೆ. 'ರಾಜನು ಸತ್ತನು; ರಾಣಿಯೂ ಸತ್ತಳು' ಇದು ಕಥೆ; 'ರಾಜನು ಸತ್ತನು; ಆದ್ದರಿಂದ ರಾಣಿಯೂ ಸತ್ತಳು'-ಇದು ಸಂವಿಧಾನ ಎಂದು ಫಾರ್‌ಸ್ಟರ್ ಹೇಳುತ್ತಾನೆ. ಎಂದರೆ, ಅವನ ಮತದಲ್ಲಿ ಬಿಡಿ ಬಿಡಿಯಾದ ಘಟನೆಗಳ

ನಡುವೆ ಒಂದು ಕಾರ್ಯ-ಕಾರಣ ಸಂಬಂಧವನ್ನು ತರುವ, ತಾರ್ಕಿಕ ಸಂಬಂಧವನ್ನು ಕಲ್ಪಿಸುವ ವಿಶಿಷ್ಟ ಜೋಡಣೆ ಸಂವಿಧಾನ) ಶ್ಕ್ಲಾವ್‌ಸ್ಕಿ ಇನ್ನೂ ಮುಂದುವರಿದು, ಕಥೆಯ ಗತಿಯನ್ನು ತಡೆಯುವ ಎಲ್ಲಾ ತಂತ್ರಗಳೂ, ಆ ಗತಿಯನ್ನು ನಿಧಾನ ಗೊಳಿಸುವ ಎಲ್ಲಾ ಅಂಶಗಳೂ ಒಟ್ಟಾರೆಯಾಗಿ ಸಂವಿಧಾನದ ಪರಿಕಲ್ಪನೆಯಲ್ಲಿ ಸೇರುತ್ತದೆ; ಎಂದರೆ ಕೇವಲ ಕಥೆಯ ದೃಷ್ಟಿಯಿಂದ ಅನುಯುಕ್ತ ಹಾಗೂ ಅಪ್ರಸ್ತುತ ಎಂದು ತೋರುವ ಉಪಕಥೆಗಳು, ಕಥಾನಕದ ವಿವಿಧ ಅಂಗಗಳ ಸ್ಥಳಪಲ್ಲಟ, ದೀರ್ಘ ಭಾಷಣಗಳು ನಿರೂಪಕನು ಓದುಗರೊಡನೆ ಆಡುವ ನಾನಾ ಬಗೆಯ ಆಟಗಳು- ಇವೆಲ್ಲವೂ ಸಂವಿಧಾನದ ಅವಿಭಾಜ್ಯ ಅಂಗಗಳಾಗುತ್ತವೆ. (ಈ ಸಂದರ್ಭದಲ್ಲಿ ಅಮೆರಿಕನ್ ನವ್ಯ ವಿಮರ್ಶಕ ಜಾನ್‌ಕ್ರೋ ರ್‍ಯಾನ್‌ಸಮ್ ಕಾವ್ಯದಲ್ಲಿ 'ಶಿಲ್ಪ' ಮತ್ತು 'ಬಂಧ'-Structure ಮತ್ತು Texture-ಎಂಬ ಪರಿಕಲ್ಪನೆಗಳನ್ನು ಸರಿ ಸುಮಾರು ಶ್ಕ್ಲಾವ್‌ಸ್ಕಿಯ ವಿಚಾರಗಳಿಗೆ ಸಮಾನವಾಗಿ ಬೆಳೆಯುವುದನ್ನು ನಾವು ಗಮನಿಸಬಹುದು).

ಒಂದು ಕಥಾನಕದಲ್ಲಿ/ಗದ್ಯಕಾವ್ಯದಲ್ಲಿ ಈ ವಿಧದ ಸಂವಿಧಾನದ ಕಲ್ಪನೆ ಸ್ಥೂಲವಾಗಿ ೧೦ನೇ ಶತಮಾನದ ಭಾರತೀಯ ಲಾಕ್ಷಣಿಕ ಕುಂತಕನಿಗೆ ಇತ್ತೆಂದು ಕಾಣುತ್ತದೆ. ತನ್ನ 'ವಕ್ರೋಕ್ತಿ ಜೀವಿತ'ದ ನಾಲ್ಕನೆಯ ಅಧ್ಯಾಯದಲ್ಲಿ ಕುಂತಕನು 'ಪ್ರಕರಣ ವಕ್ರತೆ' ಮತ್ತು 'ಪ್ರಬಂಧ ವಕ್ರತೆ' ಎಂಬ ಪರಿಕಲ್ಪನೆಗಳನ್ನು ಚರ್ಚಿಸುತ್ತಾನೆ. 'ಪ್ರಕರಣವಕ್ರತೆ'ಯಲ್ಲಿ ಒಂದು ಕೃತಿಯಲ್ಲಿ ಬರುವ ಘಟನೆಗೂ ಅದರ ಮೂಲ ಸ್ವರೂಪಕ್ಕಿರುವ ವ್ಯತ್ಯಾಸ. ಉಪಕಥೆಗಳು ಹಾಗೂ ದೃಷ್ಟಾಂತಗಳು (ಪತಕಾ, ಪ್ರಕರಿ ಮತ್ತು ಕಥಾಂತರ) ಹಾಗೂ ಇವೆಲ್ಲವುಗಳ ಜೋಡಣೆಯಲ್ಲಿ ಕಾಣುಬರುವ ಪ್ರತಿಭೆ ಇವೇ ಮುಂತಾದ ವಿಷಯಗಳನ್ನು ಕುಂತಕನು ಚರ್ಚಿಸುತ್ತಾನೆ.

## (೨) ಶಿಕಾಗೋ ವಿಮರ್ಶಕರು

ರಶ್ಯನ್ ರೂಪನಿಷ್ಠ ಚಿಂತಕರ ನಂತರ ಮತ್ತೆ ಆಳವಾಗಿ ಕಥನಕಲೆಯನ್ನು ಅಭ್ಯಸಿಸಿ ಬೆಳಸಿದವರು 'ನಿಯೋ ಅರಿಸ್ಟಾಟಲಿಯನ್ಸ್' ಎಂದು ಕರೆಯಲ್ಪಡುವ ಶಿಕಾಗೋ ವಿಮರ್ಶಕರು. ಈ ಶತಮಾನದ ಮಧ್ಯಭಾಗದಲ್ಲಿ ಪ್ರಸಿದ್ಧಿಗೆ ಬಂದ ಈ ವಿಮರ್ಶಕ ರಲ್ಲಿ ನಾವು ಮುಖ್ಯವಾಗಿ (ಕಥನ ಶಾಸ್ತ್ರದ ದೃಷ್ಟಿಯಿಂದ) ಆರ್. ಎಸ್. ಕ್ರೇನ್ ಮತ್ತು ವೇನ್ ಬೂತ್ (R. S. Crane ಮತ್ತು Wayne Booth) ಇವರು ಗಳ ವಿಚಾರಗಳನ್ನು ಪರಿಶೀಲಿಸಬಹುದು.

"ಟಾಮ್ ಜೋನ್ಸ್" ಎಂಬ ಫೀಲ್ಡಿಂಗ್‌ನ ಕಾದಂಬರಿಯನ್ನು ಕುರಿತ ತನ್ನ ಸುಪ್ರಸಿದ್ಧ ಲೇಖನದಲ್ಲಿ ಕ್ರೇನ್ 'ಸಂವಿಧಾನವೆಂದರೆ ಕಥಾಸಾರಂಶವಲ್ಲ' ಎಂಬ

ನಿಲುವಿನಿಂದ ಪ್ರಾರಂಭಿಸಿ, ಒಂದು ಕಥಾನಕದ (ಸಣ್ಣ ಕಥೆ, ಕಾದಂಬರಿ ಇತ್ಯಾದಿ) ಸಂವಿಧಾನವನ್ನು ಹೀಗೆ ವ್ಯಾಖ್ಯಾನಿಸುತ್ತಾನೆ: "ಒಂದು ಕಾದಂಬರಿಯ ಅಥವಾ ನಾಟಕದ ಪಾತ್ರ, ಕಾರ್ಯ, ಮತ್ತು ಆಲೋಚನಾ ಕ್ರಮ ಈ ಮೂರೂ ಅಂಶಗಳ ಒಂದು ವಿಶಿಷ್ಟ ಜೋಡಣೆ" ('... The Plot of any Novel or Drama is the particular temporal Synthesis effected by the Writer or the elements of action, character, and thought') ಕಾರ್ಯ, ಪಾತ್ರ, ಆಲೋಚನಾ ಕ್ರಮ- ಈ ಮೂರು ಅಂಶಗಳು ಕೃತಿಯಿಂದ ಕೃತಿಗೆ ಬದಲಾಗುವ ಅಂಶಗಳು; ಅಲ್ಲದೆ ಒಂದು ಕೃತಿಯಲ್ಲಿಯೇ ಈ ಮೂರು ಅಂಶಗಳಲ್ಲಿ ಯಾವುದೋ ಒಂದರಲ್ಲಿ ಉಂಟಾಗುವ ಬದಲಾವಣೆ ಆ ಕೃತಿಯ ಸಂವಿಧಾನಕ್ಕೆ ಏಕಸೂತ್ರತೆಯನ್ನು ಕೊಡುತ್ತದೆ. ಈ ದೃಷ್ಟಿಯಿಂದ ನಾವು 'ಕಾರ್ಯಾಧಾರಿತ ಸಂವಿಧಾನ,' 'ಪಾತ್ರಾಧಾರಿತ ಸಂವಿಧಾನ' ಮತ್ತು 'ಆಲೋಚನಾ ಕ್ರಮಕ್ಕೆ ಒತ್ತು ಕೊಡುವ ಸಂವಿಧಾನ'-ಎಂದು ಮೂರು ಸಂವಿಧಾನ ವರ್ಗಗಳನ್ನು ಗುರುತಿಸಬಹುದು. (ಆನಂತರ ನಾರ್ಮನ್ ಫ್ರೀಡ್‌ಮನ್ ಕ್ರೇನ್‌ನ ವಿಶ್ಲೇಷಣೆಯನ್ನೇ ಮುಂದುವರಿಸುತ್ತಾ 'ರುದ್ರ ಸಂವಿಧಾನ,' 'ಕರುಣಾಜನಕ ಸಂವಿಧಾನ' ಇತ್ಯಾದಿ ೧೬ ಸಂವಿಧಾನ ವರ್ಗಗಳನ್ನು ಗುರುತಿಸುತ್ತಾನೆ.)

ಕಾರ್ಯಾಧಾರಿತ ಸಂವಿಧಾನದಲ್ಲಿ (Plots of Action) ಸನ್ನಿವೇಶಗಳು ಬದಲಾಗಿ ಆ ಬದಲಾವಣೆಯ ಕಾರಣದಿಂದ ಸಂವಿಧಾನಕ್ಕೆ ಒಂದು ಹೊಸ ಅರ್ಥ, ಹೊಸ ತಿರುವು ಸಿಕ್ಕುತ್ತದೆ. ಅರ್ಥಾತ್ ಅರಿಸ್ಟಾಟಲ್ ನಿರೂಪಿಸುವ 'ಶೋಧ' ಹಾಗೂ 'ಭಾಗ್ಯಪಲ್ಲಟ' ('Discovery' and 'Reversal of fortune') ಪರಿಕಲ್ಪನೆಗಳನ್ನು ಈ ಸಂದರ್ಭದಲ್ಲಿ ಕ್ರೇನ್ ಉಪಯೋಗಿಸಿಕೊಳ್ಳುತ್ತಾನೆ. ಈ ವಿಷಯವನ್ನು ಸ್ಪಷ್ಟಪಡಿಸಲು ಕ್ರೇನ್ ನೀಡುವ 'ಈಡಿಪಸ್ ರೆಕ್ಸ್' ನಾಟಕದ ನಿದರ್ಶನವನ್ನು ಗಮನಿಸಬಹುದು. ತನ್ನ ತಂದೆಯ ಕೊಲೆಗಾರನಿಗಾಗಿ ಸತತ ಪ್ರಯತ್ನಿಸುತ್ತಿರುವ ಈಡಿಪಸ್ ಒಂದು ಘಟ್ಟದಲ್ಲಿ ತಾನೇ ಆ ಕೊಲೆಗಾರ ಎಂಬ ಸತ್ಯವನ್ನು ಅರಿಯುತ್ತಾನೆ. ಈ ಸತ್ಯದ ಆವಿಷ್ಕಾರದ ಕಾರಣದಿಂದ ಅವನ ಪರಿಸ್ಥಿತಿ ಸಂಪೂರ್ಣ ಬದಲಾಗುತ್ತದೆ. ತನ್ನ ರಾಜ್ಯ ಹೆಂಡತಿ-ಮಕ್ಕಳು ಎಲ್ಲರನ್ನೂ ತೊರೆದು ಕೊನೆಗೆ ತನ್ನ ಕಣ್ಣುಗಳನ್ನು ತಾನೇ ಕಿತ್ತುಕೊಂಡು ಆ ರಾಜ್ಯದಿಂದಲೇ ಹೊರ ಹೋಗುತ್ತಾನೆ. ಕನ್ನಡದಲ್ಲಿ 'ಗ್ರಾಮಾಯಣ' ಕಾದಂಬರಿಯ ಸಂವಿಧಾನವನ್ನು ಈ ದೃಷ್ಟಿಯಿಂದ 'ಕಾರ್ಯಾಧಾರಿತ ಸಂವಿಧಾನ'ವೆಂದು ನಾವು ನೋಡಬಹುದು.

'ಪಾತ್ರಾಧಾರಿತ ಸಂವಿಧಾನ' ಎಂದರೆ ಕೃತಿಯು ಬೆಳೆಯುತ್ತಾ ಹೋದಂತೆ ಮುಖ್ಯ ಪಾತ್ರದಲ್ಲಾಗುವ 'ವೈಚಾರಿಕ ಪಲ್ಲಟ' ; ಎಂದರೆ, ಯಾವುದೋ ಒಂದು ಘಟ್ಟದಲ್ಲಿ

ತನಗಾಗುವ ಅನುಭವಗಳ ಕಾರಣದಿಂದ ಕೃತಿಯ ಮುಖ್ಯಪಾತ್ರ ತನ್ನ ಆಲೋಚನಾ ಕ್ರಮವನ್ನೇ, ತನ್ನ ವೈಚಾರಿಕತೆಯನ್ನೇ ಬದಲಾಯಿಸುವದರಿಂದ ಕೃತಿಯ ಸಂವಿಧಾನಕ್ಕೆ ಒಂದು ವಿಶಿಷ್ಟ ಅರ್ಥ, ನೂತನ ಆಯಾಮ ದೊರಕುತ್ತವೆ. ಇಂಥ ಸಂವಿಧಾನಗಳಿಗೆ ನಿದರ್ಶನಗಳಾಗಿ ನಾವು ಇಂಗ್ಲಿಷ್‌ನ 'The Portrait of a Lady' ಕನ್ನಡದ 'ಸಂಸ್ಕಾರ,' 'ಅಂಚು' ಮುಂತಾದ ಕೃತಿಗಳನ್ನು ಉಲ್ಲೇಖಿಸಬಹುದು.

ಮೂರನೇ ವರ್ಗದಲ್ಲಿ ಬರುವ ಸಂವಿಧಾನಗಳಲ್ಲಿ ಮುಖ್ಯ ಪಾತ್ರದ ಆಲೋಚನಾ ಕ್ರಮದಲ್ಲಾಗುವ ಬದಲಾವಣೆಗೆ ಒತ್ತು ನೀಡುತ್ತದೆ. ಈ ವರ್ಗದ ಉದಾಹರಣೆಗಾಗಿ ಕ್ರೇನ್ ಇಂಗ್ಲಿಷ್ ಕಾದಂಬರಿ 'ಹಕಲ್‌ಬರಿ ಫಿನ್' ಕೃತಿಯನ್ನು ಉಲ್ಲೇಖಿಸುತ್ತಾನೆ, ಆದರೆ ಕ್ರೇನ್ ರೂಪಿಸುವ ಎರಡನೇ ಮತ್ತು ಮೂರನೇ ವರ್ಗಗಳನ್ನು ಖಚಿತವಾಗಿ ಬೇರ್ಪಡಿಸುವುದು ಕಷ್ಟ. ಪ್ರಾಯಶಃ ಖಚಿತವಾಗಿ ನಾವು 'ಪಾತ್ರಾಧಾರಿತ' ಮತ್ತು 'ಕಾರ್ಯಾಧಾರಿತ' ಎಂದು ಸಂವಿಧಾನಗಳಲ್ಲಿ ಎರಡೇ ವರ್ಗಗಳನ್ನು ಗುರುತಿಸುವುದು ಯೋಗ್ಯ. ಮತ್ತೆ ಕ್ರೇನ್ ಹೇಳುವ ಸಂವಿಧಾನದಲ್ಲಿ ಇರಬೇಕಾದ 'ಏಕಸೂತ್ರತೆ' ಹಾಗೂ 'ಆದಿ-ಮಧ್ಯ-ಅಂತ್ಯ' ಅಂಶಗಳಿಂದ ಕೂಡಿದ ಸಾವಯವ ಸಂಬಂಧ, ಇತ್ಯಾದಿ ಗುಣಗಳು ಅರಿಸ್ಟಾಟಲ್‌ನಿಂದ ಪ್ರಾರಂಭಿಸಿ ಎಲ್ಲಾ ವಿಮರ್ಶಕರೂ ಎತ್ತಿ ಹಿಡಿಯುವ ಗುಣಗಳೇ, ಅವುಗಳಲ್ಲಿ ವಿಶೇಷವೇನು ಇಲ್ಲ. (ಕುಂತಕನನ್ನು ಹಿಂದೆ ಹೆಸರಿಸಿದ ಕಾರಣ ಇಲ್ಲಿ ಮತ್ತೊಂದು ಮಾತು. ಕುಂತಕನಿಗೂ ಕೂಡ ಒಂದು ಕೃತಿಯ ಸಂವಿಧಾನದಲ್ಲಿ ಮುಖ್ಯವಾಗುವುದು ಬಿಡಿ ಬಿಡಿ ಘಟನೆಗಳನ್ನು–ಪ್ರಕರಣಗಳನ್ನು–ಒಂದೆಡೆ ತಂದು ಕೃತಿಗೆ ಏಕಸೂತ್ರತೆಯನ್ನು ಕಲ್ಪಿಸುವ ನ್ಯಾಸ. ಒಂದು ಪ್ರಕರಣ ತನಗೆ ತಾನೇ ಎಷ್ಟೇ ರೋಚಕವಾಗಿದ್ದರೂ ಅದು ಕೃತಿಯ ಒಟ್ಟಾರೆ ಶಿಲ್ಪಕ್ಕೆ ಸೇರದಿದ್ದರೆ ಅದೊಂದು ದೋಷ ಎಂದು ಕುಂತಕನು ವಾದಿಸಿದ್ದಾನೆ.)

ಮತ್ತೊಬ್ಬ ಪ್ರಮುಖ ಶಿಕಾಗೋ ವಿಮರ್ಶಕನೆಂದರೆ ವೇನ್ ಬೂತ್. ಇವನ 'ರೆಟರಿಕ್ ಆಫ್ ಫಿಕ್ಶನ್ (Rhetoric of Fiction. 1961) ಎಂಬ ವಿಮರ್ಶಾ ಗ್ರಂಥ ಕಥನಶಾಸ್ತ್ರದ ಇತಿಹಾಸದಲ್ಲಿ ಒಂದು ಮುಖ್ಯ ಮೈಲಿಗಲ್ಲು. 'ರೆಟರಿಕ್' ಶಬ್ದವನ್ನು ಬೂತ್ 'ಲೇಖಕನಿಂದ ಉಪಯೋಗಿಸಲ್ಪಡುವ ಎಲ್ಲಾ ವಿಧದ ತಂತ್ರಗಳ ಒಟ್ಟು ಮೊತ್ತ' ಎಂದು ವ್ಯಾಖ್ಯಾನಿಸುತ್ತಾನೆ. ಈ ಗ್ರಂಥದ ಆರನೇ ಅಧ್ಯಾಯದಲ್ಲಿ ಬೂತ್ 'ವಿವಿಧ ನಿರೂಪಕರನ್ನು' ಕುರಿತು ಅವರ ನಿರೂಪಣಾ ಕ್ರಮಗಳನ್ನು ಕುರಿತು ಆಳವಾಗಿ ಚರ್ಚಿಸುತ್ತಾನೆ.

ಬೂತ್ ಮಂಡಿಸುವ ಕಥನ ಶಾಸ್ತ್ರದ ಅಡಿಗಲ್ಲು ಅವನ 'ಸೂಚಿತ ಲೇಖಕ'ನ (Implied Author) ಪರಿಕಲ್ಪನೆ. 'ಸೂಚಿತ ಲೇಖಕ'ನೆಂದರೆ ನಿಜ ಲೇಖಕನಲ್ಲ. (ಉತ್ತಮ ಪುರುಷ–ನಾನು–ನಿರೂಪಣೆಯಲ್ಲಿಯೂ ಕೂಡ ಕೃತಿಯ 'ನಾನು' ಕೃತಿ

ಯನ್ನು ರಚಿಸಿದ ನಿಜ ಲೇಖಕನಿಗಿಂತ ಭಿನ್ನವಾಗಿರುತ್ತಾನೆ: ಕಥೆಗಳನ್ನು ನಮಗೆ ನಿರೂಪಿಸುವ ಭಾಸರ್ ಯಾತ್ರಿಕನು ನಿಜ ಜೀವನದ ಜಫ್ರಿ ಛಾಸರ್‌ನಿಂದ ಭಿನ್ನವಾಗಿರುವಂತೆ. ಅಲ್ಲದೆ, ಒಂದು ಕೃತಿಯಲ್ಲಿ ಸ್ಪಷ್ಟವಾಗಿ ಗೋಚರಿಸುವ ನಿರೂಪಕನಿಲ್ಲದಿದ್ದಾಗಲೂ 'ಸೂಚಿತ ಲೇಖಕ' ನಿಜಜೀವನದ ಲೇಖಕನಿಗಿಂತ ಬೇರೆಯಾಗಿರುತ್ತಾನೆ) 'ಸೂಚಿತ ಲೇಖಕ'ನೆಂದರೆ ನಾವು ಒಂದು ಕೃತಿಯನ್ನು ಓದಿಯಾದ ನಂತರ. ಆ ಕೃತಿಯು ಎತ್ತಿ ಹಿಡಿಯುವ ಹಾಗೂ ತಿರಸ್ಕರಿಸುವ ಮೌಲ್ಯಗಳ ಆಧಾರದ ಮೇಲೆ ಮಾನಸಿಕವಾಗಿ ಕಲ್ಪಿಸಿಕೊಳ್ಳುವ ಒಂದು ವ್ಯಕ್ತಿತ್ವ. ನಮಗೆ ಕೃತಿಕಾರನ ಪರಿಚಯವಿಲ್ಲದೇ ಇದ್ದಾಗ ಒಂದು ಕೃತಿಯನ್ನು ಓದಿ 'ಈ ಕೃತಿಕಾರನು ಸ್ತ್ರೀ ದ್ವೇಷಿಯಾಗಿದ್ದಿರಬೇಕು. ಈ ಲೇಖಕನು ಪ್ರಾಯಶಃ ಉತ್ಕಟ ಪ್ರಕೃತಿ ಪ್ರೇಮಿ' ಎಂದು ಊಹಿಸುವಂತೆ.

'ಸೂಚಿತ ಲೇಖಕ'ನು ಒಂದು ತುದಿಯಲ್ಲಿ ನಿರೂಪಕನಿಗೆ ಅತ್ಯಂತ ಸಮೀಪವಿರಬಹುದು. (ಎಂದರೆ ಕೃತಿಯ ಒಟ್ಟಾರೆ ಮೌಲ್ಯಗಳಿಗೂ ನಿರೂಪಕನ ಮೌಲ್ಯಗಳಿಗೂ ಏನೂ ವ್ಯತ್ಯಾಸವಿಲ್ಲದಿರಬಹುದು) ಅಥವಾ, ಮತ್ತೊಂದು ತುದಿಯಲ್ಲಿ ನಿರೂಪಕನಿಗೆ ಅತ್ಯಂತ ವಿರುದ್ಧವಾಗಿರಬಹುದು. (ವಿಡಂಬನಾತ್ಮಕ ಕಥೆ–ಕಾದಂಬರಿಗಳಲ್ಲಿ ಸಂಭವಿಸುವಂತೆ). ಮತ್ತೆ ಈ ಎರಡು ವಿರುದ್ಧ ತುದಿಗಳ ನಡುವೆ ಯಾವುದೋ ಒಂದು ದೂರದಲ್ಲಿ ಸೂಚಿತ ಲೇಖಕನಿರಬಹುದು ಈ ಎರಡೂ ತುದಿಗಳಲ್ಲಿರುವ ನಿರೂಪಕರನ್ನು ಬೂತ್ 'ವಿಶ್ವಸನೀಯ' ಮತ್ತು 'ಅವಿಶ್ವಸನೀಯ' ನಿರೂಪಕರೆಂದು ಕರೆಯುತ್ತಾನೆ. ಹಾಗೆಯೇ ಒಬ್ಬ ನಿರೂಪಕನ ವಿಶ್ವಸನೀಯತೆ ಮತ್ತೊಬ್ಬನದಕ್ಕಿಂತ ತುಸು ಹೆಚ್ಚು ಅಥವಾ ಕಮ್ಮಿ ಇರಬಹುದು. ಎಂದರೆ, ವಿಶ್ವಸನೀಯತೆಯ ಸರಳ ರೇಖೆಯ ಒಂದು ತುದಿಯಲ್ಲಿ ಸೂಚಿತ ಲೇಖಕನಿದ್ದರೆ ಆ ರೇಖೆಯಲ್ಲಿ ಎಲ್ಲಿ ಬೇಕಾದರೂ ನಿರೂಪಕರಿರಬಹುದು. ಅಮೆರಿಕನ್ ಕಾದಂಬರಿಕಾರ ಹೆಮಿಂಗ್ವೇನ ನಿರೂಪಕರು ಅತ್ಯಂತ ವಿಶ್ವಸನೀಯ (Reliable) ರಾಗಿದ್ದಾರೆ, ಸ್ವಿಫ್ಟ್ ರಚಿತ 'ಒಂದು ಸರಳ ಯೋಜನೆ'('A Modest Proposal") ಎಂಬ ಪ್ರಬಂಧದ ನಿರೂಪಕ ಅತ್ಯಂತ 'ಅವಿಶ್ವಸನೀಯ' (Unreliable).

ಬೂತ್ ಕಲ್ಪಿಸುವ 'ಅವಿಶ್ವಸನೀಯ' ನಿರೂಪಕನ ಪರಿಕಲ್ಪನೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಮೇಲೆ ಹೆಸರಿಸಿದ ಪ್ರಬಂಧವನ್ನೇ ತುಸು ವಿವರವಾಗಿ ನೋಡಬಹುದು. ಈ ಪ್ರಬಂಧದ ನಿರೂಪಕ (ಹೆಸರಿಲ್ಲದಿದ್ದರೂ ನಾವು ಕಲ್ಪಿಸಿಕೊಳ್ಳುವ ವ್ಯಕ್ತಿತ್ವ) ಒಬ್ಬ ಯಶಸ್ವೀ ಉದ್ಯಮಪತಿ. ಐರಿಷ್ ಜನಗಳ ಬಡತನವನ್ನು ನಿವಾರಿಸಲು ಇವನು ಒಂದು 'ಸರಳ ಯೋಜನೆ'ಯನ್ನು ಓದುಗರ ಮುಂದಿಡುತ್ತಾನೆ. ಅದೆಂದರೆ ನಾಲ್ಕು ವರ್ಷದೊಳಗಿನ ಎಲ್ಲಾ ಐರಿಷ್ ಮಕ್ಕಳನ್ನೂ ಇಂಗ್ಲಂಡ್ ಹಾಗೂ

ಯೂರೋಪಿನ ಶ್ರೀಮಂತರಿಗೆ ಆಹಾರವನ್ನಾಗಿ ರಫ್ತು ಮಾಡುವುದು. ಅತ್ಯಂತ ಭಾವನಾರಹಿತ ಶೈಲಿಯಲ್ಲಿ ಈ ನಿರೂಪಕನು 'ವರ್ಷಕ್ಕೆ ಎಷ್ಟು ಮಕ್ಕಳು ಹುಟ್ಟಬಹುದು–ಅವುಗಳಲ್ಲಿ ಎಷ್ಟು ಸಾಯಬಹುದು–ಅವರ ಮಾಂಸವನ್ನು ಸಂಸ್ಕರಿಸಲು ಎಷ್ಟು ಖರ್ಚಾಗಬಹುದು' ಎಂದೆಲ್ಲ ಅಂಕಿ–ಸಂಖ್ಯೆಗಳನ್ನು ಕೊಡುತ್ತಾ ಹೋಗುತ್ತಾನೆ. ಐರಿಷ್ ಜನರ ಒಳಿತಿಗಾಗಿಯೇ ತಾನು ಈ ಯೋಜನೆಯನ್ನು ರೂಪಿಸುತ್ತಿದ್ದೇನೆ ಎನ್ನುತ್ತಾನೆ

ಈ ನಿಲುವು ಸೂಚಿತ ಲೇಖಕನ ನಿಲುವಿಗಿಂತ ಭಿನ್ನ ಎಂದು ಓದುಗರಿಗೆ ತಿಳಿಯುವುದು ಹೇಗೆ? ಸೂಚಿತ ಲೇಖಕನಿಗೂ ನಿರೂಪಕನಿಗೂ ದೂರವನ್ನು ಕಲ್ಪಿಸುವ ತಂತ್ರ 'ವ್ಯಂಗ್ಯ'-ಅದೂ 'ನಾಟಕೀಯ ವ್ಯಂಗ್ಯ'(Dramatic Irony). ನಿರೂಪಕನೇ ಲೇಖಕನ ವ್ಯಂಗ್ಯಕ್ಕೆ ಗುರಿಯಾದಾಗ, ಆದರೆ ನಿರೂಪಕನಿಗೆ ಅದರ ಅರಿವಿಲ್ಲದಿರುವಾಗ ಇಂಥಹ ದೂರ ಸಾಧಿಸಲ್ಪಡುತ್ತದೆ. ನಿರೂಪಕನ ವಾದದಲ್ಲಿಯೇ ಅವನಿಗೆ ಅರಿವಿಲ್ಲದಂತಿರುವ ವಿರೋಧಾಭಾಸ. ನಿರೂಪಣೆಯಲ್ಲಿ ಸಹಜವಾಗಿ ಕಂಡುಬರುವ ಅತಿಶಯೋಕ್ತಿ (ಎಂದರೆ 'ಇದು ಸತ್ಯವಾಗಿರಲು ಸಾಧ್ಯವೇ ಇಲ್ಲ' ಎಂದು ಕೂಡಲೇ ಓದುಗರಿಗೆ ಹೊಳೆಯುವ ಅಂಶ), ನಿರೂಪಕನ ಮಾತಿನಲ್ಲಿಯ ಅತಾರ್ಕಿಕತೆ ಇವೇ ಮುಂತಾದವುಗಳು ನಿರೂಪಕನ ಅವಿಶ್ವಸನೀಯತೆಯನ್ನು ಓದುಗರಿಗೆ ಮನದಟ್ಟು ಮಾಡಿಸುತ್ತವೆ.

ಕನ್ನಡದಲ್ಲಿ ಯಶಸ್ವೀ ವಿಡಂಬನಾತ್ಮಕ ಕಥೆ–ಕಾದಂಬರಿಗಳು ಬಹಳ ಕಮ್ಮಿ. ವ್ಯಂಗ್ಯಕ್ಕಿಂತ ವಾಚ್ಯವೇ ಜಾಸ್ತಿ. ಅಡಿಗರ 'ನೆಹರೂ ನಿವೃತ್ತರಾಗುವುದಿಲ್ಲ' ಕವಿತೆಯ ನಿರೂಪಕ, ಗುಲ್ವಾಡಿ ವೆಂಕಟರಾಯರ 'ಭಾಗಿರಥಿ' ಕಾದಂಬರಿಯ ನಿರೂಪಕಿ–ಇವರುಗಳನ್ನು ವೇನ್ ಬೂತ್ ಕಲ್ಪಿಸುವ 'ಅವಿಶ್ವಸನೀಯ ನಿರೂಪಕ'ರೆಂದು ಕರೆಯಬಹುದು.

## ಭಾಗ : ೨

ಮೊದಲನೆಯ ಭಾಗದಲ್ಲಿ ನಾವು ಕಥನ ಶಾಸ್ತ್ರ ಪಶ್ಚಿಮ ರಾಷ್ಟ್ರಗಳಲ್ಲಿ ಹೇಗೆ ರಶ್ಯನ್ ರೂಪನಿಷ್ಠ ಚಿಂತಕರಿಂದ ಪ್ರಾರಂಭವಾಗಿ ಆನಂತರ 'ಶಿಕಾಗೋ ವಿಮರ್ಶಕ'ರಿಂದ ಮುಂದುವರಿಸಲ್ಪಟ್ಟಿತು ಎಂದು ನೋಡಿದೆವು. ಈಗ 'ಶಿಕಾಗೋ ವಿಮರ್ಶಕ'ರಲ್ಲಿ ಒಬ್ಬನಾದ ವೇನ್ ಬೂತ್ 'ನಿರೂಪಣೆ'ಯ ವ್ಯಾಖ್ಯಾನವನ್ನು ಹೇಗೆ ಮುಂದುವರಿಸುತ್ತಾನೆಂದು ನೋಡೋಣ.

"ಸೂಚಿತ ಲೇಖಕ"ನಿಗೆ ಎಷ್ಟು ಹತ್ತಿರ ಅಥವಾ ದೂರ ನಿರೂಪಕನಿರುತ್ತಾನೆಂಬು ದನ್ನು ಲಕ್ಷಿಸಿ ವೇನ್ ಬೂತ್ "ವಿಶ್ವಸನೀಯ ನಿರೂಪಕ" ಹಾಗೂ "ಅವಿಶ್ವಸನೀಯ ನಿರೂಪಕ" ಎಂದು ಎರಡು ವರ್ಗಗಳನ್ನು ಕಲ್ಪಿಸಿಯಾದ ನಂತರ ನಿರೂಪಕರನ್ನು ಮತ್ತೊಂದು ನೆಲೆಯಿಂದಲೂ ವಿಶ್ಲೇಷಿಸಬಹುದೆನ್ನುತ್ತಾನೆ. ಒಂದು ಕಥನದಲ್ಲಿ (ಅದು ಕಥೆ, ಕಾದಂಬರಿ ಹಾಗೂ ಕಾವ್ಯವಿರಬಹುದು) ನಿರೂಪಕನು "ರೂಪ ನಿರ್ದಿಷ್ಟ"ನಾಗಿ ಅಥವಾ "ರೂಪ ರಹಿತ"ನಾಗಿ ಇರಬಹುದು. ("dramatised ಮತ್ತು undramatised narrator") "ರೂಪ ರಹಿತ" ನಿರೂಪಕನೆಂದರೆ ಅವನ ವ್ಯಕ್ತಿತ್ವವು ಸ್ಪಷ್ಟವಾಗಿ ಕೃತಿಯಲ್ಲಿ ಎಲ್ಲಿಯೂ ಕಂಡು ಬರುವುದಿಲ್ಲ. ಓದುಗರಿಗೆ ಅವನು ಅದೃಶ್ಯನಾಗಿಯೇ ಇದ್ದು ತನ್ನ ಅಸ್ತಿತ್ವವನ್ನು ಎಲ್ಲಿಯೂ ಸ್ಪಷ್ಟವಾಗಿ ಪ್ರಕಟಪಡಿಸದೆ ಕಥೆಯನ್ನು ನಿರೂಪಿಸುತ್ತಾನೆ. ಹೆಚ್ಚಿನ ಕಥೆ-ಕಾದಂಬರಿಗಳಲ್ಲಿ ಕಂಡುಬರುವುದು ಇಂತಹ ಅದೃಶ್ಯ, ರೂಪ ರಹಿತ ನಿರೂಪಕನೇ ಆದರೆ ಇಲ್ಲಿ ವೇನ್ ಬೂತ್ ಒತ್ತಿ ಹೇಳುವ ಒಂದು ಮಾತೆಂದರೆ, ಕೃತಿಕಾರನೇ ಕಥೆಯನ್ನು ನಿರೂಪಿಸುತ್ತಿದ್ದಾನೆಂದು ನಮಗೆ ಭಾಸವಾಗುವ ಸಂದರ್ಭಗಳಲ್ಲಿಯೂ ("ಸಂಧ್ಯಾ ರಾಗ" "ಮಾಡಿ ಮಡಿದವರು" ಇವೇ ಮುಂತಾದ ಕೃತಿಗಳಲ್ಲಿಯೂ) ನಾವು ಕೃತಿ ಯನ್ನು ಸೃಜಿಸಿದ ಕೃತಿಕಾರನಿಗೂ ಕೃತಿಯನ್ನು ನಿರೂಪಿಸುವ (ಅದೃಶ್ಯನಾಗಿದ್ದರೂ) ನಿರೂಪಕನಿಗೂ ಇರುವ ವ್ಯತ್ಯಾಸವನ್ನು ಮರೆಯಬಾರದು.

"ರೂಪ ನಿರ್ದಿಷ್ಟ" ನಿರೂಪಕನೆಂದರೆ ಕೃತಿ–ಪ್ರಪಂಚದಲ್ಲಿ ಇತರ ಪಾತ್ರಗಳಿಗಿಂತ ಭಿನ್ನವಾದ, ಸ್ಪಷ್ಟ ಅಸ್ತಿತ್ವವನ್ನು ಹೊಂದಿರುವ ನಿರೂಪಕ. ಇವನಿಗೆ ಕೃತಿಯಲ್ಲಿ ಸ್ಪಷ್ಟ ನಾಮ ನಿರ್ದೇಶವಿರಬಹುದು. (ಇತರ ಪಾತ್ರಗಳಿಗಿರುವಂತೆ) ಅಥವಾ ಇಲ್ಲದಿರ ಬಹುದು. ಮತ್ತು ಇಂತಹ ನಿರೂಪಕ ಕೇವಲ ಪ್ರೇಕ್ಷಕನ ನೆಲೆಯಿಂದ ಓದುಗರಿಗೆ ನಡೆದ ಘಟನೆಗಳನ್ನು "ವರದಿ" ಮಾಡಬಹುದು; ಅಥವಾ ಕಥೆಯ ಒಂದು ಪಾತ್ರ ದಂತೆಯೇ ಇವನೂ ಘಟನೆಗಳಲ್ಲಿ, ಕೃತಿಯ ಕ್ರಿಯೆಯಲ್ಲಿ ಭಾಗವಹಿಸಬಹುದು.

ಈ ಪರಿಕಲ್ಪನೆಗಳನ್ನು ಸ್ಪಷ್ಟಗೊಳಿಸಲು ಕೆಲವು ಕೃತಿಗಳನ್ನು ಗಮನಿಸೋಣ, ಕಾರಂತರ ಕೃತಿಗಳಲ್ಲಿ "ಚೋಮನ ದುಡಿ" "ಮರಳಿ ಮಣ್ಣಿಗೆ" ಇವೇ ಮುಂತಾದ ಕಾದಂಬರಿಗಳ ನಿರೂಪಕ "ರೂಪ ರಹಿತ" ನಿರೂಪಕ. "ಬೆಟ್ಟದ ಜೀವ" ಕಾದಂಬ ರಿಯ ನಿರೂಪಕ "ರೂಪ ನಿರ್ದಿಷ್ಟ; ಇವನಿಗೆ ಹೆಸರಿಲ್ಲದಿದ್ದರೂ ಉತ್ತಮ ಪುರುಷ ನಿರೂಪಣೆಯಿದ್ದರೂ ಇವನು ಕಾದಂಬರಿಯ ಇತರ ಪಾತ್ರಗಳಿಗಿಂತ ಭಿನ್ನನಾದವನು. ಆದರೆ ಇವನು ಕಥೆಯ ಆಗುಹೋಗುಗಳಲ್ಲಿ ಸಕ್ರಿಯವಾಗಿ ಭಾಗವಹಿಸುವುದಿಲ್ಲ. "ಅಳಿದ ಮೇಲೆ" ಕಾದಂಬರಿಯ ನಿರೂಪಕನಿಗೂ ಒಂದು ಸ್ಪಷ್ಟ ಹೆಸರಿಲ್ಲದಿದ್ದರೂ ಅವನು ಇತರ ಪಾತ್ರಗಳಿಗಿಂತ ಭಿನ್ನನಾಗಿದ್ದಾನಷ್ಟೆ ಅಲ್ಲ, ಕಥೆಯ ಘಟನೆಗಳಲ್ಲಿ

ಸಕ್ರಿಯವಾಗಿ ಪಾಲುಗೊಳ್ಳುತ್ತಾನೆ ಎಂದರೆ, ಕಥೆಯ ಮುಖ್ಯ ಪಾತ್ರಗಳಲ್ಲಿ ಇವನೂ ಒಬ್ಬನು. 'ಮೂಕಜ್ಜಿಯ ಕನಸುಗಳು' 'ಮೈಮನಗಳ ಸುಳಿಯಲ್ಲಿ' ಮುಂತಾದ ಕಾದಂಬರಿಗಳಲ್ಲಿ ಕೃತಿಯ ಮುಖ್ಯ ಪಾತ್ರವೇ/ಪಾತ್ರಗಳೇ ನಿರೂಪಕರಾಗುತ್ತಾರೆ. ಇದೇ ದಿಕ್ಕಿನಲ್ಲಿ ನಾವು ಮುಂದುವರಿದರೆ, ಒಂದು ವಸ್ತು/ವಿಷಯದ ಬಗ್ಗೆ ಎಲ್ಲೆಲ್ಲಿ ಕಾರಂತರ ದೃಷ್ಟಿಕೋನ ಸಂಕೀರ್ಣವಾಗಿರುತ್ತದೆಯೋ, ಇಬ್ಬಗೆಯದಾಗಿರುತ್ತದೆಯೋ, ಅಲ್ಲೆಲ್ಲಾ ಅವರ ಕೃತಿಗಳ ನಿರೂಪಕರು ರೂಪ ನಿರ್ದಿಷ್ಟರಾಗಿರುತ್ತಾರೆ ಮತ್ತು ಆ ನಿರೂಪಕರಿಗೂ 'ಸೂಚಿತ ಲೇಖಕನಿ'ಗೂ ಸಾಕಷ್ಟು ಅಂತರವಿರುತ್ತದೆ– ಎಂಬ ಅರಿವು ನಮಗಾಗುತ್ತದೆ. ಎಂದರೆ, ಸ್ವತಂತ್ರ ಅಸ್ತಿತ್ವವುಳ್ಳ, ಖಚಿತ ಸ್ವರೂಪವನ್ನು ಪಡೆದಿರುವ ನಿರೂಪಕನು (ಅವನಿಗೊಂದು ಖಚಿತ ಹೆಸರಿರಬಹುದು ಅಥವಾ ಅವನು ಕೇವಲ 'ನಾನು' ಆಗಿರಬಹುದು) ಒಂದು ವಸ್ತುವನ್ನು/ವಿಷಯವನ್ನು ಭಿನ್ನ ಭಿನ್ನ ಕೋನಗಳಿಂದ ನೋಡಲು, ಪರೀಕ್ಷಿಸಲು ಬೇಕಾದಂತಹ 'ದೂರ'ವನ್ನು ಕೃತಿಕಾರನಿಗೆ ಕಲ್ಪಿಸಿಕೊಡುತ್ತಾನೆ.

ಇಂತಹ ಸ್ವತಂತ್ರ ಅಸ್ತಿತ್ವವುಳ್ಳ ನಿರೂಪಕರು ಒಂದು ಕೃತಿಯಲ್ಲಿ ಒಬ್ಬರಿರಬಹುದು ಅಥವಾ ಅನೇಕರಿರಬಹುದು. ಆದರೆ, ಅನೇಕ ನಿರೂಪಕರಿದ್ದಾರೆಂಬ ಮಾತ್ರಕ್ಕೇ ಕೃತಿಯ ಸಂಕೀರ್ಣತೆ ಹೆಚ್ಚೇನೂ ಅನಿವಾರ್ಯವಾಗಿ ಆಗಬೇಕಿಲ್ಲ. ಉದಾಹರಣೆಗೆ, ಮಾಸ್ತಿಯವರ ಅನೇಕ ಕಥೆಗಳಲ್ಲಿ ಇಬ್ಬರು ಅಥವಾ ಮೂರು ನಿರೂಪಕರಿದ್ದಾರೆ; ಆದರೆ ಕಥೆ ಮಾತ್ರ ಒಮ್ಮುಖವಾಗಿಯೇ ನಡೆಯುತ್ತದೆ. ಇದಕ್ಕೆ ಭಿನ್ನವಾಗಿ 'ವೆಂಕಟಶಾಮಿಯ ಪ್ರಣಯ' ಮುಂತಾದ ಕಥೆಗಳಲ್ಲಿ ಬರುವ ಬಹು ನಿರೂಪಕರು ಕಥೆಗೆ ಬಹುಮುಖತ್ವವನ್ನು ಕೊಟ್ಟು, ಕಥೆಗೆ ಆಳವನ್ನೂ ಸಂಕೀರ್ಣತೆಯನ್ನೂ ಕೊಡುತ್ತಾರೆ.

ಬಹು ನಿರೂಪಕರು ಒಂದು ಕೃತಿಯಲ್ಲಿ ಬಂದಾಗ ಅವರು ಹಾಗೂ ಅವರ ನಿಲುವುಗಳು ಪರಸ್ಪರ ಘರ್ಷಿಸಿ, ಖಂಡಿಸಿ, ವಿರೋಧಿಸಿ, ಕೃತಿಗೆ ಒಂದು ಅಪೂರ್ವ ಬಹುಮುಖತ್ವವನ್ನು ಕೊಡುತ್ತಾರೆಂಬುದಕ್ಕೆ ಫಾಕ್‌ನರ್ (Faulkner) ಬರೆದಿರುವ 'ದ ಸೌಂಡ್ ಅಂಡ್ ದ ಫ್ಯೂರಿ' (The Sound and the Fury) ಕಾದಂಬರಿಯನ್ನು ಗಮನಿಸಬಹುದು. ಈ ಕೃತಿಯಲ್ಲಿರುವ ನಿರೂಪಕರು ನಾಲ್ಕು : ಜನ್ಮತಃ ಪೆದ್ದನಾದ, ಮೂವತ್ತೆರಡು ವರ್ಷಗಳಾದರೂ ನಾಕು ವರ್ಷಗಳ ಬೌದ್ಧಿಕ ಬೆಳವಣಿಗೆಯ ಬೆಂಜಿ; ಅತೀವ ಕೋಮಲ ಹೃದಯದ ಅಪ್ರಬುದ್ಧ ಭಾವಜೀವಿ ಕ್ವೆಂಟಿನ್; ಸ್ವಾರ್ಥ ಹಾಗೂ ದ್ವೇಷ– ಮಾತ್ಸರ್ಯಗಳ, ವ್ಯಾಪಾರೀ ಮನೋಭಾವದ ಜೇಸನ್; ಮತ್ತು ಮತ್ತೊಬ್ಬರ ದುಡಿಮೆಯಲ್ಲೇ ತನ್ನ ಆಯಸ್ಸೆಲ್ಲವನ್ನೂ ಕಳೆಯುವ, ಸರಳ

ಜೀವಿ (ಕಾರಂತರ ಅಜ್ಜಿಯರನ್ನು ನೆನಪಿಗೆ ತರುವ) ಡಿಲ್ಸಿ. ಈ ನಾಲ್ವರೂ ಜಗತ್ತನ್ನು, ಹಾಗೂ ತಮ್ಮನ್ನು ನೋಡುವ ದೃಷ್ಟಿಕೋನಗಳು ಸಂಪೂರ್ಣವಾಗಿ ಭಿನ್ನ-ಭಿನ್ನ; ಅರಿಯುವ ಮಾರ್ಗಗಳು ಸಂಪೂರ್ಣವಾಗಿ ಬೇರೆ ಬೇರೆ. ಇವರೆಲ್ಲರ ಮೌಲ್ಯಗಳೂ, ನಿಲುವುಗಳೂ ಭಾಗಶಃ ಗ್ರಾಹ್ಯ. ಇವರ ನಿರೂಪಣೆಗಳೂ, ನಿರೂಪಣಾ ಕ್ರಮಗಳೂ (ಎಂದರೆ ಅವರ ನಿರೂಪಣೆಯಲ್ಲಿ ಉಪಯೋಗಿಸಲ್ಪಡುವ ಪದಗಳು, ಪ್ರತಿಮೆಗಳು, ವಾಕ್ಯ ರಚನೆಗಳು, ತರ್ಕ-ಇತ್ಯಾದಿ) ಕೃತಿಯುದ್ದಕ್ಕೂ ಪರಸ್ಪರ ತಾಕಲಾಡಿ, ಘರ್ಷಿಸಿ, ಒಂದನ್ನೊಂದು ತಿದ್ದಿ, ತಿದ್ದಲ್ಪಟ್ಟು ಇಡೀ ಬದುಕಿನ ಈ ವಿಶ್ವದ ಒಂದು ಅತ್ಯಂತ ಗಾಢ ಹಾಗೂ ಸಂಕೀರ್ಣ ಅರಿವನ್ನು, ಅನುಭವವನ್ನು ನಮಗೆ ನೀಡುತ್ತವೆ.

ಬಹು ನಿರೂಪಕರನ್ನುಳ್ಳ ಕಥನಗಳು ಕನ್ನಡದಲ್ಲಿ ಅಪಾರವಿಲ್ಲದಿದ್ದರೂ ಸಾಕಷ್ಟಿವೆ. (ಇಲ್ಲಿ ಮುಂದುವರಿಯುವ ಮೊದಲು ಒಂದು ಮಾತು: ಬಹು ನಿರೂಪಕರಿಲ್ಲದಿದ್ದರೆ ಕೃತಿಗೆ ಸಂಕೀರ್ಣತೆ ಇರುವುದಿಲ್ಲ ಎಂದಾಗಲೀ ಅಥವಾ ಅನೇಕ ನಿರೂಪಕರಿದ್ದರೆ ಕೃತಿ ತಾನೇ ತಾನಾಗಿ ಶ್ರೇಷ್ಠವಾಗುತ್ತದೆಂದಾಗಲೀ ಅಲ್ಲ, ಈ ಲೇಖನದಲ್ಲಿ ಬರುವ ಹೇಳಿಕೆಗಳು ವರ್ಣನಾತ್ಮಕ. ಅಷ್ಟೆ. ಕನ್ನಡದ ಅನೇಕ ಪ್ರಮುಖ ಕಾದಂಬರಿಗಳು- 'ಮಲೆಗಳಲ್ಲಿ ಮದುಮಗಳು,' 'ಮರಳಿ ಮಣ್ಣಿಗೆ,' 'ಗ್ರಾಮಾಯಣ,' 'ಸಂಸ್ಕಾರ' ಇವೇ ಮುಂತಾದ ಕೃತಿಗಳಲ್ಲಿ ನಿರೂಪಣೆ ಒಬ್ಬನಿಂದಲೇ-ರೂಪ ರಹಿತ ನಿರೂಪಕನಿಂದಲೇ-ಸಾಗುತ್ತದೆ.) ಈ ನೆಲೆಯಲ್ಲಿ ಕಂಡುಬರುವ ಪ್ರಮುಖ ಕಾದಂಬರಿಗಳೆಂದರೆ ಭೈರಪ್ಪನವರ 'ಪರ್ವ.' ಕಾಮರೂಪಿಯವರ 'ಕುದುರೆ ಮೊಟ್ಟೆ,' ಪ್ರಭುಶಂಕರ್ ಅವರ 'ಬೆರಗು' ಇತ್ಯಾದಿ.

ನಿರೂಪಣಾ ತಂತ್ರದ ದೃಷ್ಟಿಯಿಂದ 'ಪರ್ವ' ಕನ್ನಡದ ಒಂದು ಅಪೂರ್ವ ಕೃತಿ, (ಈ ಕೃತಿ 'ಪುರಾಣ'ವನ್ನು ಬಳಸಿರುವ ಬಗೆಯನ್ನು ಕುರಿತು ಭಿನ್ನಾಭಿಪ್ರಾಯಗಳಿಗೆ ಅವಕಾಶವಿದೆ.) ಕೃಷ್ಣನನ್ನು ಹೊರತುಪಡಿಸಿ ಉಳಿದ ಮಹಾಭಾರತದ ಪ್ರತಿಯೊಂದು ಮುಖ್ಯ ಪಾತ್ರವೂ ಇಡೀ ಮಹಾಭಾರತದ ಘಟನೆಗಳನ್ನು ತನ್ನದೇ ಆದ ವಿಶಿಷ್ಟ ಹಾಗೂ ಸೀಮಿತ ದೃಷ್ಟಿಕೋನದಿಂದ ನೋಡುವ, ಅರಿಯುವ, ಅರ್ಥೈಸುವ ಬಗೆ ಅಪೂರ್ವ. ಮಹಾಭಾರತದ-ಎಂದರೆ ಒಂದು ಸಂಸ್ಕೃತಿಯ, ಒಂದು ಇತಿಹಾಸದ, ಒಟ್ಟಾರೆಯಾಗಿ ಇಡೀ ಮಾನವ ಬದುಕಿನ-ನಮ್ಮ ಅರಿವು ಕ್ಷಣದಿಂದ ಕ್ಷಣಕ್ಕೆ ಬದಲಾಗುತ್ತಾ ಹೋಗುತ್ತದೆ; ನಾವು 'ಸತ್ಯ'ವೆಂದು ಗ್ರಹಿಸುವುದು ಎಷ್ಟು ಸಾಪೇಕ್ಷ. ಎಷ್ಟು ಸೀಮಿತ ಎನ್ನುವುದು ನಮ್ಮ ಅನುಭವಕ್ಕೆ ಬರುತ್ತದೆ. ಸಂಪೂರ್ಣ ಸತ್ಯದ ಅರಿವು ಅಪೂರ್ಣರಾದ ಹಾಗೂ ಸೀಮಿತ ಇಂದ್ರಿಯಗಮ್ಯ ಜ್ಞಾನವನ್ನೇ ಅವಲಂಬಿಸಬೇಕಾದ ನಮಗೆ ಎಂದೂ ಸಾಧ್ಯವಿಲ್ಲ ಎಂಬ ನಿಲುವಿಗೆ ಕೃತಿ ನಮ್ಮನ್ನು ತರುತ್ತದೆ.

ಪ್ರಮಾಣದಲ್ಲಿ ಚಿಕ್ಕದಾದರೂ ಇಷ್ಟೇ ಯಶಸ್ವಿಯಾದ (ಕಥನ ತಂತ್ರದ ನೆಲೆಯಲ್ಲಿ) ಕೃತಿ 'ಕುದುರೆ ಮೊಟ್ಟೆ.' ಇದರಲ್ಲಿ ಬದಲಾಗುತ್ತಿರುವ ಗತಿಶೀಲ ಸಮಾಜವನ್ನು ಮೂರು ತಲೆಮಾರಿನ ಪ್ರತಿನಿಧಿಗಳು ತಮ್ಮದೇ ಕೋನದಿಂದ ನೋಡುತ್ತಾರೆ ಹಾಗೂ ಅರ್ಥೈಸುತ್ತಾರೆ. ಮೂರು ಜನ ಹೇಳುವ ಕಥೆಯೂ ಒಂದೇ- ಒಂದು ಸಂಸಾರದ ಕಥೆ. ಆದರೆ ಮೂರೂ ಜನರಿಗೆ ಆ ಕಥೆಯ ಮಗ್ಗುಲುಗಳು ಬೇರೆ ಬೇರೆಯಾಗಿ ಕಾಣಿಸುತ್ತವೆ-ಆ ಕಥೆಯ ಅರ್ಥ ಭಿನ್ನ ಭಿನ್ನವಾಗಿ ಹೊಳೆಯುತ್ತದೆ. ಇಂತಹ ಒಂದು ವಿಶಿಷ್ಟ ಕೃತಿ ಕನ್ನಡದ ಓದುಗರ/ವಿಮರ್ಶಕರ ಗಮನವನ್ನು ಸಾಕಷ್ಟು ಏಕೆ ಸೆಳೆಯಲಿಲ್ಲ ಎಂದು ನನಗೆ ಆಶ್ಚರ್ಯವಾಗುತ್ತದೆ.

ಹಾಗೆಯೇ ಬಹುನಿರೂಪಕರನ್ನುಳ್ಳ ಮತ್ತೊಂದು ಕೃತಿ (ಇದೂ ವಿಮರ್ಶಕರ ಅವಜ್ಞೆಗೆ ಗುರಿಯಾದಂತೆ ನನಗೆ ತೋರುತ್ತದೆ) ಪ್ರಭುಶಂಕರ್ ಅವರ "ಬೆರಗು". ಈ ಕೃತಿಯಲ್ಲಿ ಕ್ರಾಂತಿಪುರುಷ ಬಸವಣ್ಣನವರು ಅವರ ಸಮಕಾಲೀನರಿಗೆ ಹೇಗೆ ಕಂಡರು. ಹೇಗೆ ಅವರನ್ನು ಅವರ ಸಮಕಾಲೀನರು ಅರ್ಥೈಸಿದರು ಎಂಬ ಶೋಧ ಯಶಸ್ವಿಯಾಗಿ ಚಿತ್ರಿಸಲ್ಪಟ್ಟಿದೆ. "ಪರ್ವ"ದ ನಿರೂಪಕರು ಮಹಾಭಾರತದ ಸಿದ್ಧ ಪಾತ್ರಗಳಾದರೆ, "ಕುದುರೆ ಮೊಟ್ಟೆ"ಯ ನಿರೂಪಕರು ಕಾಲ್ಪನಿಕ ಪಾತ್ರಗಳಾದರೆ "ಬೆರಗು"ವಿನ ನಿರೂಪಕರೆಲ್ಲಾ ಐತಿಹಾಸಿಕ ವ್ಯಕ್ತಿಗಳು-ಮಾದಿರಾಜ, ಮಾದಾಂಬೆ, ಸಿದ್ಧರಾಮ, ಮಹದೇವಿಯಕ್ಕ ಇತ್ಯಾದಿ. (ಈ ಕೃತಿಗೆ ಮಾದರಿ ಲೇಖಕರೇ ತಿಳಿಸುವಂತೆ ಖಲೀಬ್ ಗಿಬ್ರಾನನ "ದ ಸನ್ ಆಫ್ ಮ್ಯಾನ್") ಬಹುನಿರೂಪಕರಿರುವ ಯಾವುದೇ ಕೃತಿಯಲ್ಲಿಯೂ ನಿರೂಪಣೆ ಎರಡು ದಿಕ್ಕಿನಲ್ಲಿ ಸಾಗುತ್ತದೆ: ನಿರೂಪಕನು ಕಥೆಯನ್ನು-ಎಂದರೆ ಇತರರ ಬಗ್ಗೆ-ನಿರೂಪಿಸುತ್ತಿರುವಂತೆಯೇ ತನ್ನ ಬಗ್ಗೆಯೂ ತನಗರಿವಿಲ್ಲದಂತೆಯೇ ಹೇಳುತ್ತಿರುತ್ತಾನೆ. ಆದ್ದರಿಂದ ನಾವು ಏಕಕಾಲಕ್ಕೆ ಕಥೆಯನ್ನು ಮತ್ತು ನಿರೂಪಕನನ್ನೂ ಮತ್ತು ಈ ಸಂದರ್ಭದಲ್ಲಿ ಅನಿವಾರ್ಯವಾಗಿ ಉಂಟಾಗುವ 'ದರ್ಪಣ' ಇನ್ನೂ ಸಂಕೀರ್ಣವಾಗುತ್ತದೆ. ನಾವು ಇತಿಹಾಸದಿಂದ ಗ್ರಹಿಸಿರುವ ಬಿಜ್ಜಳ, ಬಸವಣ್ಣ ಮುಂತಾದವರ ವ್ಯಕ್ತಿತ್ವ-ಕೃತಿ ನಮಗೆ ತೋರಿಸುವ ಬಿಜ್ಜಳ ಬಸವಣ್ಣ ಇವರ ವ್ಯಕ್ತಿತ್ವ, ಮತ್ತೆ ಬಿಜ್ಜಳನಿಗೆ ಕಾಣುವ ಬಸವಣ್ಣ, ನಾರಾಯಣ ಕ್ರಮಿತನಿಗೆ ಕಾಣುವ ಬಿಜ್ಜಳ ಹಾಗೂ ಬಸವಣ್ಣ ಹೀಗೆ ಒಂದು ಘಟನೆಯ, ಒಂದು ಸಾಮಾಜಿಕ ಕ್ರಾಂತಿಯ ವಿವಿಧ ಮಗ್ಗುಲುಗಳು ಪರಸ್ಪರ ಘರ್ಷಿಸುತ್ತವೆ; ಘರ್ಷಿಸಿ ಸತ್ಯದ ಹಾಗೂ ಸತ್ಯಕ್ಕಾಗಿ ತಡಕಾಡುವ ವಿವಿಧ ಮುಖಗಳನ್ನು ಆ ತಡಕಾಟದಲ್ಲಿ ಅನಿವಾರ್ಯವಾಗುವ ಸಂಕಟವನ್ನು ಕೃತಿ ನಮ್ಮೆದುರಿಗೆ ಬಿಚ್ಚಿಡುತ್ತಾ ಹೋಗುತ್ತದೆ. ಈ ಕೃತಿಯ ಮತ್ತೊಂದು ವಿಶೇಷವೇನೆಂದರೆ ಇದರ ಬಹುತೇಕ ನಿರೂಪಕರು

ಸಮಾಜದ ಕೆಳವರ್ಗಗಳಿಗೆ ಸೇರುವ ಜನಸಾಮಾನ್ಯರು-ವಿವರಗಳ ಆಧಾರದ ಮೇಲೆ ಕಲ್ಪಿಸಲ್ಪಟ್ಟಿರುವ ವ್ಯಕ್ತಿಗಳು (ಸಂಪೋಳಿ ನಾಗದೇವ, ದುರ್ಗವ್ವ, ಸಂಕವ್ವ ಮುಂತಾದವರು).

ಹಾಸ್ಯದ ನೆಲೆಯಲ್ಲಿಯೇ ಇದ್ದರೂ ಬಹುನಿರೂಪಕ ತಂತ್ರವನ್ನು ಯಶಸ್ವಿಯಾಗಿ ಪ್ರಯೋಗಿಸುವ ಕನ್ನಡದ ಮತ್ತೊಂದು ಮುಖ್ಯ ಕಾದಂಬರಿಯೆಂದರೆ ನಾ ಕಸ್ತೂರಿ ಯವರ "ಗೃಹದಾರಣ್ಯಕ". ಇದರಲ್ಲಿ ಒಬ್ಬ ಅಧಿಕಾರಿಯ ಜೀವನವನ್ನು ಅವನ ಸಂಪರ್ಕಕ್ಕೆ ಬರುವ ಇತರರು (ಡ್ರೈವರ್, ವಕಾಲಿ, ಗುಮಾಸ್ತ, ಇತ್ಯಾದಿ) ತಮಗೆ ತಿಳಿದಂತೆ ನಿರೂಪಿಸುತ್ತಾ ಹೋಗುತ್ತಾರೆ.

ನಿರೂಪಣೆಯ ಚರ್ಚೆಯನ್ನೇ ಮುಂದುವರಿಸಿದರೆ, ನಿರೂಪಕರು (ರೂಪ ನಿರ್ದಿಷ್ಟ ಹಾಗೂ ರೂಪ ರಹಿತ) ಅನೇಕ ಸಂದರ್ಭಗಳಲ್ಲಿ "ಸ್ವಾಭಿಮುಖ" ರಾಗಿರಬಹುದು (Self-Conscious narrators). ಎಂದರೆ ಇವರುಗಳು, ಇತರರ ಬಗ್ಗೆ ನಿರೂಪಿಸುತ್ತಲೇ 'ನಿರೂಪಣೆ'ಯ ಬಗ್ಗೆಯೇ ಒಂದು ಕೃತಿಯ ಸ್ವರೂಪ-ಉದ್ದೇಶ-ಸೃಜನ ಪ್ರಕ್ರಿಯೆ ಇವುಗಳ ಬಗ್ಗೆಯೇ ಹೇಳುತ್ತಿರುತ್ತಾರೆ; ಇವರುಗಳ ಮೂಲಕ ಕೃತಿಕಾರ ತನ್ನ ಬಗ್ಗೆಯೇ, ತಾನು ಕೃತಿಯನ್ನು ರಚಿಸುವ ಬಗ್ಗೆಯೇ ನಮಗೆ ಹೇಳು ತ್ತಿರುತ್ತಾನೆ. ಇಂತಹ ಕೃತಿಗಳನ್ನು 'ಕುನ್‌ಸ್ಟ್ಲರ್ ರೊಮಾನ್' (Kunstler roman) ಎಂದು ಕರೆಯುತ್ತಾರೆ. 'ಸ್ವಾಭಿಮುಖ ನಿರೂಪಕ'ರ ಉತ್ತಮ ಉದಾಹರಣೆಗಳೆಂದರೆ, ಇಂಗ್ಲೀಷ್‌ನಲ್ಲಿ ಜಾಯ್ಸ್‌ನ "The Portrait of an Artist as a Young Man," ಜಾನ್ ಬಾರ್ತ್‌ನ "Lost in the Fun House, ಥಾಮಸ್‌ಮನ್‌ನ "The Magic Mountain", ಇತ್ಯಾದಿ ಕೃತಿಗಳ ನಿರೂಪಕರು.

ಕನ್ನಡದಲ್ಲಿ ಸ್ವಾಭಿಮುಖ ನಿರೂಪಣಾ ತಂತ್ರವನ್ನು ಪಯೋಗಿಸಿರುವ ಕೃತಿಗಳು ಹೆಚ್ಚೇ ನಿಲ್ಲ. ಚಿತ್ತಾಲರ "ಸಿದ್ಧಾರ್ಥ," ಶಾಂತಿನಾಥ ದೇಸಾಯಿಯವರ "ಸೃಷ್ಟಿ" ಬೋಳುವಾರು ಅವರ "ಅಂಕ" ಇವೇ ಮುಂತಾದ ಕಥೆ-ಕಾದಂಬರಿಗಳು ಈ ವರ್ಗಕ್ಕೆ ಸೇರುತ್ತವೆ. ಅಲ್ಲದೆ, ಸ್ವಾಭಿಮುಖ ಸಾಹಿತ್ಯದಲ್ಲಿಯೇ ಅಪೂರ್ವವೆನಿಸುವ ತನ್ನ ತಂತ್ರದಿಂದ, ಆ ತಂತ್ರ ಎತ್ತುವ ಸಂಕೀರ್ಣ ಪ್ರಶ್ನೆಗಳಿಂದ ಬೆರಗುಗೊಳಿಸುವ ಕೃತಿಯೆಂದರೆ ಮುದ್ದಣನ "ರಾಮಾಶ್ವಮೇಧ".

ಅಷ್ಟೇನೂ ಆಂಗ್ಲ ಸಾಹಿತ್ಯದ ಪರಿಚಯವಿಲ್ಲದ ಲೇಖಕನಿಂದ, ಏಕೆಂಟು ದಶಕಗ ಳಷ್ಟು ಹಿಂದೆಯೇ (ಎಂದರೆ ಆಗ ತಾನೇ ಹೆಜ್ಜೆಯಿಡುತ್ತಿದ್ದ ಕಾದಂಬರಿಯ ಶೈಶವಾ ವಸ್ಥೆಯ ಕಾಲದಲ್ಲಿ) ಬಂದ "ರಾಮಾಶ್ವಮೇಧ" ದ ಆಧುನಿಕತೆ, ಸಂಕೀರ್ಣ

ಸ್ವಾಭಿಮುಖತೆ ಇಂದೂ ನಮ್ಮನ್ನು ದಿಗ್ಭ್ರಮೆಗೊಳಿಸುತ್ತವೆ. ಇದರ ನಿರೂಪಕ ಒಬ್ಬ ಪರಂಪರಾಗತ ಆಸ್ಥಾನ ಕವಿ 'ಮುದ್ದಣ' (ಸೂಚಿತ ಲೇಖಕನಿಗಿಂತ ತುಂಬಾ ದೂರದಲ್ಲಿರುವವ) ಅವನ ಮೂಲಕ ಲೇಖಕರು ಸಾಹಿತ್ಯದ ಸ್ವರೂಪದ ಬಗ್ಗೆ, ಸಾಹಿತ್ಯಿಕ ಭಾಷೆಯ ಬಗ್ಗೆ, ಸಾಹಿತ್ಯದ ಪ್ರಸ್ತುತತೆಯ ಬಗ್ಗೆ ಮೂಲಭೂತ ಪ್ರಶ್ನೆಗಳನ್ನೆತ್ತುತ್ತಾರೆ. ಮತ್ತು 'ಕಲ್ಪಿತ ಒದುಗ' ಮನೋರಮೆಯ ಮೂಲಕ ಸಾಧ್ಯವಾದಷ್ಟು ಉತ್ತರಗಳನ್ನು ಕೊಡುತ್ತಾರೆ. (ಈ ವಿಷಯವನ್ನು ವಿವರವಾಗಿ ನಾನು "ಸ್ವಾಭಿಮುಖ ಸಾಹಿತ್ಯ" ಎಂಬ ನನ್ನ ಲೇಖನದಲ್ಲಿ ಚರ್ಚಿಸಿದ್ದೇನೆ) "ರಾಮಾಶ್ವಮೇಧ"ದ ತಾಂತ್ರಿಕ ಕೌಶಲ್ಯವನ್ನು, ಅದರ ಸಂಕೀರ್ಣ ಸ್ವಾಭಿಮುಖತೆಯನ್ನು, ಕೃತಿಯೆತ್ತುವ ಮೌಲ್ಯಗಳ ಪ್ರಸ್ತುತತೆಯನ್ನು ನಾವು ಇನ್ನೂ ತಿಳಿಯಬೇಕಾಗಿದೆ.

ಕಥನ ಶಾಸ್ತ್ರದ ಇತಿಹಾಸದಲ್ಲಿ ರೂಪನಿಷ್ಠ ವೇನ್ ಬೂತ್ ನಂತರ ರಾಚನಿಕ ಹಾಗೂ ರಾಚನಿಕೋತ್ತರ ಚಿಂತಕರು ಬರುತ್ತಾರೆ. ಅವರನ್ನು ನಾವು ಮುಂದಿನ ಭಾಗದಲ್ಲಿ ಚರ್ಚಿಸಬಹುದು. ●

---



---

## ಸಿದ್ಧರಾಮ ಹೊನ್ಕಲ್

# ಸ್ಥಿತಿ

ಬೆಡ್‌ರೂಮಿನಲ್ಲಿ
ನಿದ್ದೆ ಸುಂಟರ ಗಾಳಿ
ಮನಸ್ಸು ಹಣತೆಯ ದೀಪ
ಅಡಿಗೆ ಮನೆಯಲ್ಲಿ
ಕುಕ್ಕರ ಸೀಟಿ
ರಸ್ತೆಯಲ್ಲಿ ರಿಕ್ಷಾದ
ಕಟಿಪಿಟಿ
ಮಾರ್ಕೇಟಿನಲ್ಲಿ
ಮೆಂತೆಯ ಸೊಪ್ಪು
ಮೇಲೆ
ಅಬಾರ್ಷನಗೊಂಡ
ಆಕಾಶ

ದಕ್ಕುವದಿಲ್ಲ ನೆಲ
ಮುಟ್ಟುವದಿಲ್ಲ ಮುಗಿಲು
ಕ್ಯಾನ್ಸರ್‌ದ ಸೂರ್ಯನಿಗೆ
ಕ್ಷಯದ ನಕ್ಷತ್ರಗಳು
ಆ ಚಂದ್ರನೋ...
ಪಾಂಡುರೋಗಿ

ಹೀಗೆ...
ಸರ್ವೋಜನ
ಸುಖಿನೋಭವಂತು!

# ಬೆಳಕಿನ ನಾಡಿನಲ್ಲಿ *

## (ಯುರೋಪ ಪ್ರವಾಸ ಕಥನದ ತುಣುಕುಗಳು)

ಎಚ್. ಎಂ. ಮಹೇಶ್ವರಯ್ಯ

ವಿದೇಶಯಾತ್ರೆ ನಮ್ಮಲ್ಲಿ ಹಿಂದಿನಿಂದಲೂ ಒಂದು ರೀತಿಯ ಸಾಮಾಜಿಕ ಪ್ರತಿಷ್ಠೆಯ ವಿಷಯ, ಜಗತ್ತನ್ನು ಸುತ್ತಾಡಿ ಬಂದವರ ಬಗ್ಗೆ ಏನೋ ಒಂದು ರೀತಿಯ ಆದರ ಭಾವನೆ. ವಿಶ್ವವಿದ್ಯಾಲಯಗಳಲ್ಲಿ ಪ್ರಾಧ್ಯಾಪಕರಾದವರೂ ಕೂಡ ವಿದೇಶಯಾತ್ರೆ ಮಾಡಿ ಬಂದವರನ್ನು ಗೌರವದಿಂದ ಕಾಣುವದನ್ನು ನೋಡಿದಾಗ ಇಡೀ ವ್ಯವಸ್ಥೆಯೇ ವಿದೇಶಯಾತ್ರೆಯ ಸಮ್ಮೋಹಕತೆಗೆ ಒಳಗಾಗಿದೆಯೇನೋ ಎನ್ನುವ ಭಾವನೆ ಮೂಡುತ್ತದೆ. ಸಣ್ಣವನಿದ್ದಾಗ 'ನಾನು ಒಂದು ಸಲವಾದರೂ ವಿದೇಶಯಾತ್ರೆ ಮಾಡಿಬರಬೇಕು' ಎಂಬ ಕನಸು ಕಂಡಿದ್ದೆ. ಈ ರೀತಿ ಕನಸು ಕಾಣಲು ಅನೇಕ ಕಾರಣಗಳಿವೆ. ನಮ್ಮ ಹಸ್ತಸಾಮುದ್ರಿಕರು, ಜ್ಯೋತಿಷಿಗಳು, ಗುಡಿಗುಂಡಾರಗಳಲ್ಲಿರುವ ದೈವಗಳೂ ಕೂಡ ವಿದೇಶಯಾತ್ರೆಯ ಬಗ್ಗೆ ಮಾತನಾಡುತ್ತವೆ. ಇಂಥವರ ಭವಿಷ್ಯ ಕೇಳಿ ಎಷ್ಟೋ ಜನ ವಿದೇಶಯಾತ್ರೆಯನ್ನು ಆಗಲೇ ಮಾಡಿ ಬಂದವರಂತೆ ಖುಷಿಪಡುತ್ತಾರೆ. ಭವಿಷ್ಯವಾಣಿ ನಿಜವಾಗುವುದೋ ಸುಳ್ಳಾಗುವುದೋ ಆ ಮಾತು ಬೇರೆ. ನನಗೂ ಸಣ್ಣವನಿದ್ದಾಗ ಜ್ಯೋತಿಷಿಗಳ ಭವಿಷ್ಯ ಕೇಳಿ ವಿದೇಶ ಪ್ರವಾಸದ ಕನಸು ಮೂಡಿತ್ತು. ಕ್ರಮೇಣ ಜ್ಯೋತಿಷಿಗಳ ಭವಿಷ್ಯವಾಣಿಯಲ್ಲಿ ಹುರುಳಿಲ್ಲ ಎಂಬ ಸತ್ಯ ಗೊತ್ತಾಗಿ ವಿದೇಯಾತ್ರೆಯ ಕನಸು ಮರೆಯಾಗಿತ್ತು.

* *

ಒಂದು ದಿನ ಜರ್ಮನಿಯ ಕಲೋನ್ ವಿಶ್ವವಿದ್ಯಾಲಯದಿಂದ ಅಂತಾರಾಷ್ಟ್ರೀಯ

* ಪ್ರಕಟವಾಗಲಿರುವ ಪುಸ್ತಕದ ಆಯ್ದ ಭಾಗಗಳು.

ದ್ರಾವಿಡ ಭಾಷಾವಿಜ್ಞಾನ ಸಮ್ಮೇಳನದಲ್ಲಿ ಭಾಗವಹಿಸಲು ಕರೆ ಬಂತು.

* *

ನಮ್ಮಲ್ಲಿ ಚಿಮ್ಮುವ ಆತ್ಮವಿಶ್ವಾಸದ ಮುಖಗಳು ಕಾಣುವುದೇ ಅಪರೂಪ. ರಸ್ತೆಯಲ್ಲಿ ಅಡ್ಡಾಡುವ ಜನಗಳ ಮುಖದಲ್ಲಿ ಅದ್ಯಾವುದೋ ಅನಾರೋಗ್ಯದ ಛಾಯೆ ಮೂಡಿರುತ್ತದೆ. ಒಂದಿಲ್ಲೊಂದು ಮನೋವ್ಯಾಧಿಯಿಂದ ಬಳಲುತ್ತಿರುವ ಇವರಿಗೆ ಮಾನಸಿಕ ಆಸ್ಪತ್ರೆಯ ತೀವ್ರತರನಾದ ಚಿಕಿತ್ಸೆಯ ಅವಶ್ಯಕತೆ ಇದೆ ಎಂದು ನನಗೆನಿಸುತ್ತದೆ. ನಗುವಿಲ್ಲದ ಬಿಗುಮಾನಿಯ ಕುಹಕ ವಿಕೃತ ಮನಸ್ಸಿನ ಜನಗಳನ್ನು ನೋಡಿದಾಗಲೆಲ್ಲ ಎಷ್ಟು ಆಸ್ಪತ್ರೆಗಳ ಅವಶ್ಯಕತೆ ಈ ದೇಶಕ್ಕಿದೆ ಎಂದೆನಿಸುತ್ತದೆ. ವಿದೇಶಗಳಲ್ಲಿ ಮನೋವ್ಯಾಧಿಯಿಂದ ಬಳಲುವವರು ಬೇಗ ಆಸ್ಪತ್ರೆ ಸೇರಿ ಗುಣಮುಖರಾಗುತ್ತಾರೆ; ಇಲ್ಲ, ತಾವು ವರ್ತಮಾನ ಸಮಾಜಕ್ಕಿಂತ ಭಿನ್ನ ಎಂದು ಸ್ವತಃ ಘೋಷಿಸಿಕೊಂಡು ಸಮಾಜದಿಂದ ಬೇರೆಯಾಗಿ, ಹಿಪ್ಪಿಗಳಾಗಿಯೋ, ಮನೆತೊರೆದ ವಿಕೃತ ಮನಸ್ಸಿನವರೋ ಆಗಿ ಉಳಿದು ಬಿಡುತ್ತಾರೆ. ಆದರೆ ನಮ್ಮಲ್ಲಿ ಆಸ್ಪತ್ರೆ ಸೇರಬೇಕಾದ ಎಷ್ಟೋ ಜನ ನಮ್ಮ ಮಧ್ಯೆ ಬದುಕುತ್ತಿರುವುದು ಒಂದು ವಿಪರ್ಯಾಸ! ಪ್ರೇತಾತ್ಮಗಳಂತೆ ಬದುಕುತ್ತಿರುವ ಈ ಜನಗಳ ಗುಂಪಿನಲ್ಲಿ ನಮ್ಮ ಅನೇಕ ಜನ ವಿದ್ಯಾವಂತರೂ ಸೇರುತ್ತಾರೆ ಎಂದರೆ ಆಶ್ಚರ್ಯ ಪಡಬೇಕಾಗಿಲ್ಲ.

ನಾನು ವಿದೇಶದ ರಸ್ತೆಗಳಲ್ಲಿ ಅಡ್ಡಾಡುವಾಗ ಇಲ್ಲಿಯಂತೆ ರಸ್ತೆಯಲ್ಲಿ ಮಲಗಿರುವ ಬೀಡಾಡಿ ನಾಯಿಗಳನ್ನಾಗಲಿ, ಅಂಡಲೆಯುವ ದನಕರುಗಳನ್ನಾಗಲಿ, ರಸ್ತೆಯ ಮೇಲೆ ಹೊಪ್ಪಳು ಸಗಣಿಯನ್ನೊಟ್ಟುವ ಎಮ್ಮೆಗಳನ್ನಾಗಲಿ ಕಾಣಲಿಲ್ಲ. ರಸ್ತೆಯ ಬದಿಯನ್ನೇ ಪಾಯಖಾನೆ ಮಾಡಿ ಗಬ್ಬುವಾಸನೆಯಲ್ಲಿಯೇ ಬದುಕುವ ನಮ್ಮ ಹಳ್ಳಿ-ನಗರಗಳನ್ನು ಅಲ್ಲಿ ಕಾಣಲಿಲ್ಲ. ಆರೋಗ್ಯ ರಕ್ಷಣೆಯ ವಿಷಯದಲ್ಲಿ ನಾವು ಎಲ್ಲಿದ್ದೇವೆ ? ಎಂಬುದನ್ನು ಯೋಚಿಸಲೂ ಕೂಡ ಆಗದಂಥ ಸ್ಥಿತಿ ನಮ್ಮಲ್ಲಿದೆ. ಸಂಸ್ಕರಿಸಿದ ಶುದ್ಧ ನೀರನ್ನು ಮಾತ್ರ ಕುಡಿಯುವ ಜರ್ಮನ್ನರು, ಯೋಗ್ಯ ಔಷಧಿಗಳನ್ನು ಮಾತ್ರ ಸೇವಿಸುವ ಬ್ರಿಟೀಷರು ನಮಗೆ ಮಾರ್ಗದರ್ಶಿಯಾಗಬೇಕಾಗಿದೆ. ಯಾಕೆಂದರೆ ಆರೋಗ್ಯವಿರದ ರಾಷ್ಟ್ರಕ್ಕೆ ಬಲವೂ ಇಲ್ಲ, ಭವಿಷ್ಯವೂ ಇಲ್ಲ.

* *

ಭಾರತೀಯ ಸಂಸ್ಕೃತಿಯ ಸಾರವನ್ನೂ, ತತ್ವದರ್ಶನವನ್ನೂ ಜಗತ್ತಿಗೆ ಪರಿಚಯಿಸಿದ ಮ್ಯಾಕ್ಸ್‌ಮುಲ್ಲರ್ ವೇದೋಪನಿಷತ್ತುಗಳ ಸಾರವನ್ನು ಹೀರಿದ ಮಹಾಮೇಧಾವಿ. ಸಂಸ್ಕೃತ ನಾಟಕ ಪರಂಪರೆಯನ್ನು ಅರಗಿಸಿಕೊಂಡ ಗಯಟೆ ಮಹಾದಾರ್ಶನಿಕ. ಕನ್ನಡ ಶಬ್ದಕೋಶವನ್ನು ರಚಿಸಿ ಎಲ್ಲ ಯುಗದ ಕನ್ನಡಿಗರ ಪ್ರೀತಿಗೆ ಪಾತ್ರನಾದ ಕಿಟೆಲ್ ಮಹಾವಿದ್ವಾಂಸ; ಮಲೆಯಾಳಿ ಭಾಷೆ ಹಾಗೂ ಸಾಹಿತ್ಯದ ಅಪಾರ

ಪಾಂಡಿತ್ಯ ಪಡೆದ ನಿಘಂಟುಕಾರ ಗುಂಡರ್ಟ್. ಜನಪದ ಸಂಸ್ಕೃತಿಯ ಬೇರುಗಳನ್ನು ಶೋಧಿಸಿ ಅದರ ವಿಶ್ವವ್ಯಾಪಕತೆಯನ್ನು ಜಗತ್ತಿಗೆ ಪರಿಚಯಿಸಿದ ಗ್ರಿಮ್ ಸಹೋದರರು. ವ್ಯಾಕರಣಕಾರ ಫೆಡ್ರಿಕ್ ವಾನ್ ಶ್ಲೀಗಲ್, ಕಾರ್ಲ್‌ಮಾರ್ಕ್ಸ್, ಕಾಂಟ್ ಲೂಥರ್, ನೀತ್ಸೆಯಂತಹ ಮಹಾಚಿಂತಕರನ್ನು ಕಂಡ ಜರ್ಮನಿ ಮರೆಯಲಾಗದ ದೇಶ.

*

ಇಂಥ ಜರ್ಮನಿಯ ಫ್ರಾಂಕ್ ಫರ್ಟ್ ವಿಮಾನ ನಿಲ್ದಾಣಕ್ಕೆ ನಾನಾಗಲೇ ಬಂದಾಗಿತ್ತು. ಸ್ಟುಟ್‌ಗಾರ್ಟ್‌ಗೆ ನಾಲ್ಕು ಘಂಟೆಯ ರೈಲು ಪ್ರಯಾಣವನ್ನು ಮುಂದುವರಿಸಿದೆ ಸ್ಟುಟ್‌ಗಾರ್ಟ್ ನಮ್ಮ ವಿಚಾರ ಸಂಕಿರಣವನ್ನು ಹಮ್ಮಿಕೊಂಡಿದ್ದ ತಾಣ ಹಾಗೂ ಪಶ್ಚಿಮ ಜರ್ಮನಿಯ ಬೇದನ್ ವುರ್ಟೆಮ್ ಬರ್ಗ್ ಪ್ರದೇಶದ ರಾಜಧಾನಿ. ನಾನು, ಅಣ್ಣಾಮಲೈ ವಿ.ವಿ. ಯ ರಾಜಶೇಖರ, ಕೇರಳದ ಶ್ರೀಮತಿ ಲಲಿತಾ ರಾಮಮೂರ್ತಿ ಸ್ಟುಟ್‌ಗಾರ್ಟಿಗೆ ಬಂದಾಗ ಮಧ್ಯಾಹ್ನ ೧೨ ಘಂಟೆಯಾಗಿತ್ತು. ನಮಗಾಗಿ ವಿಚಾರ ಸಂಕಿರಣದ ಸಂಯೋಜಕ ಡಾ. ಆಲ್‌ಬ್ರೆಕ್ಟ್ ಫ್ರೆಂಚ್ ಕಾಯುತ್ತಾ ನಿಂತಿದ್ದರು. ಅವರು ನಮ್ಮನ್ನು ಅತಿಥಿಗಳಾಗಿ ಅವರಲ್ಲಿ ಉಳಿಸಿಕೊಳ್ಳಲು ಆಹ್ವಾನಿಸಲು ಬಂದಿದ್ದ ಸ್ಲೋಪ್ ದಂಪತಿಗಳೊಡನೆ ಅವರ ಕಾರಿನಲ್ಲಿ ಡೈಸ್ಸಿಸಾವ್ ಎಂಬ ಹಳ್ಳಿಗೆ ಕಳುಹಿಸಿದರು. ಹೋಗುವಾಗ ದಾರಿಯಲ್ಲಿ ಈ ದಂಪತಿಗಳು ಜರ್ಮನಿಯ ಊರುಗಳನ್ನು ಪರಿಚಯಿಸುತ್ತಾ ಕರೆದುಕೊಂಡು ಹೋದರು. ಹತ್ತು ಘಂಟೆಗಳ ವಿಮಾನ ಯಾನ ಮತ್ತೆ ನಾಲ್ಕು ಘಂಟೆಗಳ ರೈಲುಯಾನದಿಂದ ಸ್ವಲ್ಪ ಬಳಲಿಕೆಯಾಗಿತ್ತು. ಮನೆ ತಲುಪಿದೊಡನೆ ನಮ್ಮ ವಾಸ್ತವ್ಯಕ್ಕಾಗಿ ಅವರು ನೀಡಿದ ಆ ಸುಂದರ ಕೊಠಡಿಯಲ್ಲಿ ಬೆಚ್ಚಗೆ ಹೊದ್ದುಕೊಂಡು ಮಲಗಿಬಿಟ್ಟೆ. ನಮ್ಮ ವಿಶ್ರಾಂತಿ ಕೊಠಡಿಯ ಅಚ್ಚುಕಟ್ಟುತನ, ಮೆತ್ತನೆಯ ಹಾಸಿಗೆಗಳು, ಬೆಚ್ಚನೆಯ ಹೊದಿಕೆಗಳು ನಮ್ಮ ಬಳಲಿಕೆಯನ್ನು ಕೂಡಲೇ ನೀಗಿದವು. ರಾಜಶೇಖರನಿಗೆ ಸ್ನಾನ ಮಾಡಲು ಹೇಳಿ ನಾನು ಮಲಗಿದೆ.

ಸ್ನಾನ ಮಾಡಲು ಹೋದ ರಾಜಶೇಖರ ಕ್ಷಣದಲ್ಲಿಯೇ ಮರಳಿ ಬಂದು ನನ್ನನ್ನೆಬ್ಬಿಸಿದ. ಸ್ನಾನ ಗೃಹದಲ್ಲಿರುವ ನೀರಿನ ಉಪಕರಣಗಳನ್ನು ಬಳಸಲು ಗೊತ್ತಾಗದೇ ನನ್ನನ್ನು ಕೇಳಲು ಬಂದಿದ್ದ. ನಾನು ಎದ್ದು ನೋಡಬೇಕೆನ್ನುವಷ್ಟರಲ್ಲಿ ಮಿ. ಫ್ರಿಟ್ಜ್ ಅವರಿಗೆ ನಮ್ಮ ಕಷ್ಟ ಅರ್ಥವಾಯಿತೆಂದು ಕಾಣುತ್ತದೆ, ತಾವೇ ಬಂದು ನೀರು ಬಿಡುವುದನ್ನು ರಾಜಶೇಖರನಿಗೆ ತೋರಿಸಿದರು ನಾನು ಪುನಃ ಬಂದು ಮಲಗಿದೆ. ರಾಜಶೇಖರ ಹೇಗೋ ಅರ್ಧಂಬರ್ಧ ಸ್ನಾನಮಾಡಿ ಬಂದ. ಈಗ ಸ್ನಾನಮಾಡುವ ಸರದಿ ನನ್ನದಾಯಿತು. ಅನುಮಾನಿಸುತ್ತಲೇ ಒಳಗೆ ಹೋದೆ. ನನಗೆ ಅಲ್ಲಿರುವ ಅನೇಕ

ವಿದ್ಯುತ್ ಗುಂಡಿಗಳಲ್ಲಿ ಯಾವ್ಯಾವುದನ್ನು ಬಳಸಬೇಕು ಎಂಬ ಅನುಮಾನ ಮೂಡಿತು. ವಾಪಸ್ಸು ಬಂದು ರಾಜಶೇಖರನಿಗೆ ಕೇಳಿದೆ. ಅವನಿಗೂ ಅದರ ಬಗ್ಗೆ ಸರಿಯಾದ ಮಾಹಿತಿ ಇರಲಿಲ್ಲ. ಅಂತೂ ಕೊನೆಗೆ ಸ್ನಾನಮಾಡಲು ಸಿದ್ಧನಾದೆ. ಒಂದು ಗುಂಡಿಯು ನ್ನೊತ್ತಿದೆ. ಬಿಸಿ ನೀರು ಬುಗ್ಗೆ ಬುಗ್ಗೆಯಾಗಿ ಸಿಡಿಯುತೊಡಗಿತು. ತಕ್ಷಣ ಹೇಗೋ ನಿಲ್ಲಿಸಿದೆ. ನಮ್ಮಲ್ಲಿಯಂತೆ ಬಕೀಟುಗಳಲ್ಲಿ, ಮಗ್ಗುಗಳಲ್ಲಿ. ಹೇಗೆ ಸ್ನಾನಮಾಡುವುದೋ ತೋಚಲಿಲ್ಲ. ಕೊನೆಗೆ ಟಬ್ಬಿನಲ್ಲಿ ನಿಂತುಕೊಂಡು ಬಿಸಿ ಹಾಗೂ ತಣ್ಣೀರನ್ನು ನಳ ದಲ್ಲಿಯೇ ಮಿಶ್ರವಾಗುವಂತೆ ಮಾಡಿ ಸ್ನಾನ ಮಾಡಲು ಪ್ರಾರಂಭಿಸಿದೆ. ಅದು ಸರಿ ಯೆನಿಸಲಿಲ್ಲ. ಅಲ್ಲಿರುವ ಅಸಂಖ್ಯ ವಿದ್ಯುತ್ ಉಪಕರಣಗಳು, ಪ್ಲಾಸ್ಟಿಕ್ ಶೀಶೆಯಲ್ಲಿ ತುಂಬಿರುವ ಲೋಶನ್‌ಗಳ ತಳಬುಡ ಅರ್ಥವಾಗಲಿಲ್ಲ. ಸ್ನಾನಗೃಹದಲ್ಲಿ ಸಾವನ್ನಪ್ಪಿದ ಅನೇಕರ ಬಗ್ಗೆ ನನ್ನ ನಾಡಿನಲ್ಲಿ ಕೇಳಿದ್ದೆ. ಹಾಗಾಗಿ ಯಾವುದಾದರೂ ವಿದ್ಯುತ್ ಗುಂಡಿ ಒತ್ತಿ ಕರೆಂಟು ಹರಿದು ನಾನು ಸುಟ್ಟು ಹೋದರೆ ಹೇಗೆ ಎಂಬ ಭಯವಾ ಯಿತು. ಕೊನೆಗೆ ಬೇಗ ಬೇಗನೆ ಸ್ನಾನದ ಶಾಸ್ತ್ರ ಮುಗಿಸಿ ಹೊರಬಂದೆ. ನನ್ನ ಅನು ಭವವನ್ನು ರಾಜಶೇಖರನಿಗೆ ತಿಳಿಸಿದೆ. ಅವನೂ ತಾನು ಪಟ್ಟ ಪಡಿಪಾಟಲನ್ನು ವಿವರಿಸಿದ. ಆ ಕ್ಷಣ ಈ ಜರ್ಮನಿಯೂ ಬೇಡ ಈ ಸೌಲಭ್ಯಗಳೂ ಬೇಡ ಎಂದೆನಿಸಿತು.

* *

ಒಂದು ಸಂಜೆ, ನಾನು, ರಾಜಶೇಖರ, ಸೋಮಶೇಖರ ನಾಯಕ್, ಸಕಾರಿಯಾ ಜಕಾರಿಯಾ, ಅಬ್ರಾಹಂ ಸ್ಟುಟ್‌ಗಾರ್ಟಿನ ರಸ್ತೆಯಲ್ಲಿ ಸುತ್ತಾಡುತ್ತಾ ಹೊರಟೆವು. ಜಕಾರಿಯ ಮಾತನಾಡುತ್ತಾ ಜರ್ಮನಿಯ ವಿಶೇಷವೊಂದನ್ನು ತೋರಿಸುವುದಾಗಿ ಹೇಳಿದರು. ನಾನು ರಾಜಶೇಖರನ ಕಿವಿಯಲ್ಲಿ ಏನೆಂದು ವಿಚಾರಿಸಿದೆ. ಅವನು ಉತ್ತರಿಸಲಿಲ್ಲ. ಒಡಪಿನಂತೆ ನಕ್ಕ. ನನಗೆ ತಳ ಬುಡ ಅರ್ಥವಾಗಲಿಲ್ಲ. ಹಾಗೆಯೇ ಮಾತನಾಡುತ್ತಾ ಆ್ಯಂಡ್ರ್ಯೂಸ್ ಕುಟ್ಟಿ ಉಳಿದುಕೊಂಡಿರುವ ದಕ್ಷಿಣ ಏಷಿಯಾ ಚರ್ಚ್ ವಸತಿ ಗೃಹಕ್ಕೆ ಹೋದೆವು. ಅಲ್ಲಿ ಅದು ಇದು ಮಾತನಾಡುತ್ತಾ ಚೆಲುವೆಯರ ಬೆತ್ತಲೆ ಪ್ರದರ್ಶನದ ಬಗ್ಗೆ ಮಾತು ಬಂತು. ಆ್ಯಂಡ್ರ್ಯೂಸ್ ಕುಟ್ಟಿ ಇಂತಹ ಪ್ರದರ್ಶನ ಒಂದನ್ನು ಅಮೇರಿಕೆಯಲ್ಲಿ ನೋಡಿರುವುದಾಗಿ ಹೇಳಿದ. ಈಗ ಎಲ್ಲರೂ ಸ್ಟುಟ್ ಗಾರ್ಟಿನಲ್ಲಿರುವ ಇಂತಹ ಪ್ರದರ್ಶನಕ್ಕೆ ಹೋಗಬೇಕೆಂದು ತೀರ್ಮಾನಿಸಿದರು. ನಾನು ನಿರಾಕರಿಸಿದೆ. ತಕ್ಷಣ ಜಕಾರಿಯ ಇಂಥದನ್ನು ನೋಡುವುದರಲ್ಲಿ ತಪ್ಪೇನು ಇಲ್ಲ. ಇದು ಇಲ್ಲಿಯ ಸಂಸ್ಕೃತಿಯ ಒಂದು ಭಾಗ. ಆದ್ದರಿಂದ ನಾನು ಬರಬೇಕೆಂದು ಒತ್ತಾಯಿಸಿದರು. ಬೇಲೂರಿನ ಸುಂದರ ನಗ್ನ ಶಿಲಾಬಾಲಿಕೆಯರನ್ನು, ಮಿಥುನದ ಶಿಲ್ಪಚಿತ್ರಗಳನ್ನು ನೋಡಿರುವ ನನಗೆ ಜೀವಂತ ತರುಣಿಯರನ್ನು ನಗ್ನವಾಗಿ ನೋಡ ಬೇಕೆಂಬ ಭಾವನೆ ಸರಿಕಾಣಲಿಲ್ಲ. ಮನಸ್ಸಿನ ಸರಿ ತಪ್ಪುಗಳ ದ್ವಂದ್ವದ ಮಧ್ಯೆ ಅವ ರೊಡನೆ ಹೆಜ್ಜೆಹಾಕಿದೆ, ಪಾಪ ಪ್ರಜ್ಞೆ ನನ್ನನ್ನು ಕಾಡತೊಡಗಿತು. ಅನ್ಯಮನಸ್ಕ

ಸಾಗಿಯೇ ನಡೆದೆ. ರಾಜಶೇಖರ, ಜಕಾರಿಯ ನನ್ನನ್ನು ಸಂತೃಪ್ತಿಸತೊಡಗಿದರು. ಸ್ವಲ್ಪ ಸಮಯದಲ್ಲಿಯೇ ಒಂದು ಭವ್ಯವಾದ ಹೋಟೆಲಿನ ಮುಂಭಾಗದಲ್ಲಿ ಬಂದು ನಿಂತೆವು. ಜಕಾರಿಯ ನಮ್ಮೆಲ್ಲರ ಟಿಕೆಟ್ ಪಡೆದು ಒಳಗೆ ಕರೆದುಕೊಂಡು ಹೋದರು. ಈಗಾಗಲೇ ಇಂಥ ಪ್ರದರ್ಶನಕ್ಕೆ ಪರಿಚಿತರಾದ ಅವರನ್ನು ಅರೆಬರೆ ಉಡುಪಿನ ಸುಂದರಿಯರು ಸ್ವಾಗತಿಸಿದರು.

ಮಂದ ಬೆಳಕಿನ ವಿಶಾಲ ಪ್ರಾಂಗಣದಲ್ಲಿ ಮೆತ್ತನೆಯ ಕುರ್ಚಿಯ ಮೇಲೆ ಕುಳಿತೆವು. ಕೆಲವು ಬಿಳಿಯರೂ ಅಲ್ಲಲ್ಲಿ ಕುಳಿತಿದ್ದರು. ತಿರುಗುವ ದುಂಡಾಕಾರದ ರಂಗದ ಮೇಲೆ ಒಬ್ಬ ಸುಂದರಿ ಬಂದು ನಿಂತಳು. ರೆಕಾರ್ಡ್ ಪ್ಲೇಯರ್ ಜರ್ಮನಿಯ ವಾದ್ಯಸಂಗೀತವನ್ನು ನುಡಿಸತೊಡಗಿತು. ಹದಿನೆಂಟು ವರ್ಷದ ತರುಣಿ ಬಿಲ್ಲಿನಂತೆ ಬಾಗುತ್ತಾ ಅಂಗಾಂಗಗಳನ್ನು ಮಣಿಸುತ್ತಾ ನರ್ತಿಸತೊಡಗಿದಳು. ಎದೆಯುಡಿಗೆ ಹಾಗೂ ಪ್ಯಾಂಟೀಸ್ ತೊಟ್ಟಿದ್ದ ಅವಳ ಮೇಲೆ ಹಾಲು ಬಣ್ಣದ ಮಂದಬೆಳಕು ಬೀಳತೊಡಗಿತ. ಕ್ಷಣಾರ್ಧದಲ್ಲಿ ತಾನುಟ್ಟಿದ್ದ ಎದೆಯುಡಿಗೆಯನ್ನು ಬಿಚ್ಚಿದಳು. ನನಗೆ ಸಾವಿರಾರು ಜನರೆದುರು ನಟ್ಟ ನಡು ಹಗಲಿನಲ್ಲಿ ನನ್ನ ಬಟ್ಟೆಗಳನ್ನು ಯಾರೋ ಬಿಚ್ಚಿ ಎಸೆದಂತಾಯಿತು. ನನ್ನ ಬಟ್ಟೆಗಳನ್ನು ಮುಟ್ಟಿ ನೋಡಿಕೊಂಡೆ. ಅವು ಸುಸ್ಥಿತಿಯಲ್ಲೇ ಇದ್ದವು, ಹಾಗೆಯೇ ನರ್ತಿಸುತ್ತಾ ತನ್ನ ಕೆಳ ಉಡಿಗೆಯನ್ನು ಬಿಚ್ಚಿ ನರ್ತಿಸತೊಡಗಿದಳು. ಸುಂದರ ಅಂಗಸೌಷ್ಟವದ ಅವಳ ದೇಹದ ಭಾಗಗಳೆಲ್ಲ ಬೇಲೂರಿನ ಶಿಲಾಬಾಲಿಕೆಯರಂತೆ ಕಾಣತೊಡಗಿದವು. ಈ ಜೀವಂತ ತರುಣಿಯ ಮನಮೋಹಕತೆಯ ಮುಂದೆ ನಾನು ನೋಡಿದ ಶಿಲಾಬಾಲಿಕೆಯರು ಅಪೂರ್ವವೆನಿಸಲಿಲ್ಲ. ಬಗೆ ಬಗೆಯ ಬಣ್ಣ ಬಣ್ಣದ ಶಿಲಾಬಾಲಿಕೆಯರೆಲ್ಲ ಜೀವಂತವಾಗಿ ನರ್ತಿಸತೊಡಗಿದ ಅನುಭವವಾಗತೊಡಗಿತು. ಇದು ಕನಸೋ, ನನಸೋ ಅರ್ಥವಾಗಲಿಲ್ಲ, ಹೀಗೆಯೇ ಯಾವುದೋ ಭಾವಲೋಕದಲ್ಲಿ ಮೂಕನಾಗಿ ಕುಳಿತಿದ್ದೆ. ಕನಿಷ್ಠ ಉಡುಗೆಯ ಶೋಡಷಿಯೊಬ್ಬಳು ನನ್ನೆದುರು ನಿಂತು ಮಾತಾಡತೊಡಗಿದಳು. ಅವಳ ಮಾತು ನನಗೆ ಮೊದಲು ಅರ್ಥವಾಗಲಿಲ್ಲ. ವಾಸ್ತವಕ್ಕೆ ಬಂದು ಏನೆಂದು ಕೇಳಿದೆ, ಕುಡಿಯಲು ಏನು ಬೇಕೆಂದು ಕೇಳಿದಳು. ನಾನು ನೀರು ಸಾಕೆಂದೆ. ಆಕೆ ನಗುತ್ತಾ ತಂದು ಕೊಟ್ಟಳು. ನನ್ನ ಪಕ್ಕದ ಮಿತ್ರರು ಸೋಮರಸ ಸೇವಿಸುತ್ತಿದ್ದರು.

ಹೀಗೆಯೇ ಸಮಯ ಕಳೆದಂತೆ ಅನೇಕ ದೇಶಗಳ ಸುಂದರ ಚೆಲುವೆಯರು ಒಬ್ಬೊಬ್ಬರಾಗಿ ಬಂದು ನರ್ತಿಸುತ್ತಾ ಬೆತ್ತಲಾಗತೊಡಗಿದರು. ಎಲ್ಲರೂ ಅಪೂರ್ವ ಶರೀರ ಶ್ರೀಮಂತಿಕೆಯನ್ನು ಹೊಂದಿದ ಸುಂದರ ತರುಣಿಯರು. ಅವರ ಲಯ ಬದ್ಧ ನಡಿಗೆ, ತಾಳಬದ್ಧ ನೃತ್ಯ ಅಂಗ ಪ್ರದರ್ಶನ ನಡೆಯುತ್ತಲೇ ಇತ್ತು. ಆಗಲೇ ಎರಡು

ಗಂಟೆ ಕಳೆದುಹೋಗಿತ್ತು. ಆ ಸುಂದರ ಶೋಡಷಿಯರು ತಮ್ಮದೆಲ್ಲವನ್ನೂ ತೋರಿಸಿ ಎಲ್ಲವನ್ನೂ ಕಳೆದುಕೊಂಡರೋ; ನಾನು ಅದೆಲ್ಲವನ್ನೂ ನೋಡಿ ಏನನ್ನು ಪಡೆದು ಕೊಂಡೆನೋ ನನಗೆ ಅರ್ಥವಾಗಲಿಲ್ಲ. ರಾತ್ರಿ ಹತ್ತು ಘಂಟೆ ಆಗುತ್ತಾ ಬಂದಿತ್ತು. ಗೆಳೆಯರನ್ನು ಎಬ್ಬಿಸಿದೆ. ಅವರೆಲ್ಲ ಮನಸಿಲ್ಲದ ಮನಸ್ಸಿನಿಂದ ನನ್ನನ್ನು ಹಿಂಬಾಲಿಸಿದರು.

* *

ಟ್ಯೂಬಿಂಗನ್ ನಗರ ಅಲ್ಲಿರುವ ಉನ್ನತ ವೈದ್ಯಕೀಯ ಅಧ್ಯಯನ ಕೇಂದ್ರಗಳಿಗಾಗಿ, ಪ್ರಸಿದ್ಧ ಆಸ್ಪತ್ರೆಗಳಿಗಾಗಿ, ಧರ್ಮಶಾಸ್ತ್ರದ ಅಧ್ಯಯನ ಕೇಂದ್ರಗಳಿಗಾಗಿ ಹಾಗೂ ಇಂಡಾಲಜಿ ಅಧ್ಯಯನಕ್ಕಾಗಿ ಹೆಸರುವಾಸಿಯಾಗಿದೆ. ಈ ನಗರವನ್ನು ಕವಿಗಳ, ಶ್ರೇಷ್ಠ ಚಿಂತಕರ ನಗರವೆಂದು ಗುರುತಿಸುತ್ತಾರೆ. ನೆಕ್ಕಾರ್ ಮತ್ತು ಅಮೇರ್ ನದಿಗಳು ಇಲ್ಲಿ ಹರಿಯುತ್ತವೆ. ಟ್ಯೂಬಿಂಗನ್ ವಿಶ್ವವಿದ್ಯಾಲಯದ ಪಕ್ಕದ ಹಾದಿಯಲ್ಲಿ ಕಾರನ್ನು ನಿಲ್ಲಿಸಿ ನಾನು ಹಾಗೂ ಡ್ಯಾನಿ ಮೆಡಿಕಲ್ ಕಾಲೇಜಿನ ಭವ್ಯ ಕಟ್ಟಡದ ಮುಂದೆ ಹಾಯ್ದು ವಿಶ್ವವಿದ್ಯಾಲಯದ ಮುಖ್ಯ ಕಟ್ಟಡಗಳನ್ನು ನೋಡುತ್ತಾ ಹೊರಟೆವು. ಹೆಚ್ಚು ಜನಸಂಖ್ಯೆ ಇಲ್ಲದ ಈ ಊರು ಪ್ರಶಾಂತವಾಗಿದೆ. ಟ್ಯೂಬಿಂಗನ್ ವಿಶ್ವವಿದ್ಯಾಲಯದ ಹೆಸರು ಯೂನಿವರ್ಸಿಟಾಟ್ ಬಿಬ್ಲಿ ಯೋಥಿಕ್. ಇಲ್ಲಿಯ ಇಂಡಾಲಜಿ ವಿಭಾಗ ಕೈಗೊಂಡಿರುವ ಪುರಾಣಗಳ ಯೋಜನೆ ಅತ್ಯಂತ ಮಹತ್ವದ್ದು. ೧೯೮೫ ರ ವರೆಗೆ ಮಹಾಕಾವ್ಯ ಹಾಗೂ ಪುರಾಣಗಳ ಬಿಬ್ಲಿಯೋಗ್ರಫಿಯ ಎರಡು ಸಂಪುಟಗಳನ್ನು ಇದು ಪ್ರಕಟಿಸಿದೆ. ಹೆನ್ರಿಕ್ ವಾನ್ ಸ್ಟಿಟೆನ್ ಕ್ರಾನ್ಸ್ ಹಾಗೂ ಇತರರು ಸಂಪಾದಿಸಿದ ಈ ಸಂಪುಟಗಳಲ್ಲಿ ದ್ರಾವಿಡ ಭಾಷೆಗಳ ಅನೇಕ ಪುರಾಣ ಮಾಹಿತಿಗಳು ದೊರೆಯುತ್ತವೆ.

ಕನ್ನಡನಾಡು ಎಂದೂ ಮರೆಯದ ರೆವರೆಂಡ್ ಎಫ್. ಕಿಟ್ಟೆಲ್ ನಡೆದಾಡಿದ ಊರಿನಲ್ಲಿ, ಅವರು ನಡೆದಿರಬಹುದಾದ ಹಾದಿಯಲ್ಲಿ ನಾನು ನಡೆಯುತ್ತಿದ್ದೇನೆ ಎಂಬ ಹೆಮ್ಮೆಯನ್ನು ಅನುಭವಿಸುತ್ತಿದ್ದೆ. ರಸ್ತೆಯುದ್ದಕ್ಕೂ ಕಿಟ್ಟೆಲ್‌ರ ಹೆಜ್ಜೆಗಳನ್ನು ಅರಸುತ್ತಾ ಹೊರಟೆ. ಕ್ರಿ. ಶ ೧೮೩೨ ರ ಜುಲೈ ೪ ರಂದು ಜರ್ಮನಿಯ ರೋಸ್ಟರ್ ಹಾಫ್‌ನಲ್ಲಿ ಜನ್ಮವೆತ್ತಿ ತನ್ನ ಇಪ್ಪತ್ತೊಂದನೆಯ ವಯಸ್ಸಿನಲ್ಲಿ ಭಾರತಕ್ಕೆ, ಕನ್ನಡ ನಾಡಿಗೆ ಬಂದು ತನ್ನೆಲ್ಲ ಆಯುಷ್ಯವನ್ನು ಕನ್ನಡಕ್ಕಾಗಿಯೇ ಧಾರೆ ಎರೆದ ಮಹಾಪುರುಷ. ಕನ್ನಡ ನಾಡು ಕಂಡ ಅಪೂರ್ವ ವ್ಯಕ್ತಿ. ಇಪ್ಪತ್ತೈದು ವರ್ಷಗಳ ಕಾಲ ಹಗಲಿರುಳೂ ದುಡಿದು ಸುಮಾರು ಎಪ್ಪತ್ತು ಸಾವಿರ ಶಬ್ದಗಳ ಕನ್ನಡ-ಇಂಗ್ಲೀಷ್ ಶಬ್ದಕೋಶವನ್ನು ಸಿದ್ಧಪಡಿಸಿ ಎಲ್ಲ ಯುಗದ ಕನ್ನಡಿಗರ ಪ್ರೀತಿಗೆ ಪಾತ್ರರಾದ ಕಿಟ್ಟೆಲ್ ಕೇಶಿರಾಜನ ಶಬ್ದಮಣಿ ದರ್ಪಣವನ್ನು ಸಂಪಾದಿಸಿ ಪ್ರಕಟಿಸಿದ್ದರು. ನಾಗ

ಪರ್ಮ್ಯಾನ ಛಂದೋಂಬುಧಿಯನ್ನೂ ಸಂಪಾದಿಸಿ ಪ್ರಕಟಿಸಿದ್ದರಲ್ಲದೇ ಕೆಲವು ಕಾವ್ಯಗಳನ್ನೂ ಬರೆದಿದ್ದರು. ಬೇರೆ ಬೇರೆ ಕವಿಗಳ ಕವನ ಸಂಕಲನವನ್ನೂ ಸಂಪಾದಿಸಿ ಪ್ರಕಟಿಸಿದ್ದರು. ಕೊನೆಗೆ ಕನ್ನಡಕ್ಕಾಗಿ ವ್ಯಾಕರಣವನ್ನೂ ಬರೆದೂ ಆ ಕೃತಿ ಹೊರ ಬಂದ ಕೆಲವೇ ದಿನಗಳಲ್ಲಿ ಧನ್ಯತೆಯ ಭಾವವನ್ನು ಅನುಭವಿಸಿ ಇಹಲೋಕ ಯಾತ್ರೆಯನ್ನು ಮುಗಿಸಿದ್ದರು. ಹೀಗೆ ಕನ್ನಡದ ಬಹುಮುಖ ಜ್ಞಾನವಿದ್ದ ಕಿಟ್ಟೆಲ್ ನನ್ನ ಮನದ ತುಂಬಾ ತುಂಬಿದ್ದರು.

ಕತ್ತಲಾಗುತ್ತಾ ಬಂದಿತ್ತು. ಡ್ಯಾನಿ ಬೆಟ್ಟದ ಮೇಲಿರುವ ಅರಮನೆಯನ್ನು ನೋಡಲು ಹೋಗೋಣ ಎಂದ. ಆದರೆ ನನಗೆ ಅದಕ್ಕಿಂತ ಹೆಚ್ಚಾಗಿ ಕಿಟ್ಟೆಲ್‌ರ ಸಮಾಧಿಗೆ ನಮಿಸಿ ಕನ್ನಡಿಗನ ಪ್ರೀತಿಯ, ಕೃತಜ್ಞತೆಯ ವಂದನೆಗಳನ್ನು ಸಲ್ಲಿಸುವ ತವಕ. ಆ ಊರಿನ ಸಮಾಧಿ ಭೂಮಿಯನ್ನು ಹುಡುಕುತ್ತಾ ಹೊರಟೆವು. ಅಲ್ಲಿ ಅನೇಕ ಸಮಾಧಿ ಭೂಮಿಗಳಿದ್ದುದರಿಂದ ಯಾವ ಕಡೆಗೆ ಹೋಗಬೇಕೆಂದು ತಿಳಿಯದಾಯಿತು. ಡ್ಯಾನಿ 'ಈ ರಾತ್ರಿ ನೀನು ಈ ಸಮಾಧಿ ಭೂಮಿಯಲ್ಲಿ ಕಿಟ್ಟೆಲ್‌ರನ್ನು ಹುಡುಕುತ್ತಾ ತಿರುಗಾಡು. ನಾನು ನಿನ್ನನು ಯಾವುದಾದರೂ ಸಮಾಧಿ ಭೂಮಿಯಲ್ಲಿ ನಾಳೆ ಹುಡುಕುತ್ತೇನೆ' ಎಂದು ತಮಾಷೆ ಮಾಡಿದ. ಅವನಿಗೆ ಕಿಟ್ಟೆಲ್‌ರ ಬಗ್ಗೆ ಅವರು ಮಾಡಿದ ಮಹತ್ಕಾರ್ಯದ ಬಗ್ಗೆ ತಿಳಿಯದು. ನಾನು ತಿಳಿಸುವ ಪ್ರಯತ್ನ ಮಾಡಿದೆ. ಟ್ಯೂಬಿಂಗನ್ನಿನ ಯಾವ ಪ್ರಜೆಗೂ ಅವರ ಊರಿನವನೊಬ್ಬ ಭಾರತಕ್ಕೆ ಬಂದು ಅಗಾಧವಾದ ಕೆಲಸಮಾಡಿ ಅಲ್ಲಿಯ ಜನತೆಯ ಪ್ರೀತಿಗೆ ಪಾತ್ರನಾಗಿದ್ದಾನೆ ಎಂಬುದು ತಿಳಿಯದೇನೊ. ನನಗೆ ನಿಜಕ್ಕೂ ಖೇದವಾಯಿತು.

ಡ್ಯಾನಿಯೊಡನೆ ಹೆಜ್ಜೆ ಹಾಕುತ್ತಾ 'ಸ್ಟ್ಯಾಟ್ ಪಿಡಾಫ್' ಸಮಾಧಿ ಭೂಮಿಗೆ ಬಂದಿದ್ದೆ. ಕಿಟ್ಟೆಲ್‌ರ ಸಮಾಧಿ ಇರುವುದಿಲ್ಲೇ ಎಂದು ಓದಿದ ನೆನಪು ನನಗೆ. ಸುತ್ತಲೂ ನಸುಗತ್ತಲು ಆವರಿಸುತ್ತಿತ್ತು. ನಾನು ಧಾರವಾಡ ಬಿಡುವಾಗ ನನ್ನನ್ನು ಬೀಳ್ಕೊಡಲು ಏರ್ಪಡಿಸಿದ್ದ ಸಮಾರಂಭದಲ್ಲಿ ನನ್ನ ಹಿತೈಷಿಗಳಿಗೆ 'ಕನ್ನಡ ನಾಡು ಎಂದೂ ಮರೆಯದ ಕಿಟ್ಟೆಲ್‌ರ ಸಮಾಧಿಗೆ ನಮಿಸುವುದಾಗಿ' ಹೇಳಿದ್ದೆ. ನಸುಗತ್ತಲಿನಲ್ಲಿ ಸಾವಿರಾರು ಸಮಾಧಿಗಳ ಮಧ್ಯೆ ಚಿರ ನಿದ್ರೆಯಲ್ಲಿ ಮಲಗಿದ್ದ ಕಿಟ್ಟೆಲ್‌ರ ಸಮಾಧಿಯನ್ನು ಹುಡುಕಲಾಗಲಿಲ್ಲ. ಸಮಾಧಿ ಭೂಮಿಯ ಆವರಣದಲ್ಲಿ ನಿಂತು ಕೈ ಜೋಡಿಸಿ ನಮಿಸಿ 'ಕನ್ನಡಿಗನ ಕೃತಜ್ಞತೆಯ ಋಣವನ್ನು ಸ್ವೀಕರಿಸು' ಎಂದೆ. ಯಾವ ದೇವರನ್ನೂ, ಪುನರ್ ಜನ್ಮವನ್ನೂ ನಂಬದ ನಾನು ಯಾಕಿಷ್ಟು ಭಾವಪರವಶನಾದೆ ಎಂದುಕೊಂಡೆ. ಕಿಟ್ಟೆಲ್‌ರ ಬಗ್ಗೆ ಇರುವ ನನ್ನ ಅಗಾಧವಾದ ಪ್ರೀತಿ ಇದಕ್ಕೆ ಕಾರಣ ಎಂದು ಮನ ಉತ್ತರಿಸಿತು. ಪಕ್ಕದಲ್ಲಿ ಮೌನವಾಗಿಯೇ ಇದನ್ನೆಲ್ಲ ನೋಡುತ್ತ ನಿಂತಿದ್ದ

ಡ್ಯಾನಿ ಕರೆದ. ಭಾರವಾದ ಕಾಲುಗಳೊಡನೆ ಹೆಜ್ಜೆ ಹಾಕಿದೆ. ಆದರೂ ನನ್ನ ನಾಡಿನಿಂದ ಎಷ್ಟೋ ಸಾವಿರ ಮೈಲು ದೂರ ಬಂದ ನನಗೆ ಈ ಪ್ರವಾಸ ಸಾರ್ಥಕವಾಯಿತೆಂಬ ಭಾವನೆ ಮನದ ತುಂಬಾ ಆವರಿಸಿತ್ತು.

*

ಆ ದಿನದ ಸಂಜೆಯಾಗುತ್ತಾ ಬಂದಿತ್ತು. 'Albatch'ಗೆ ಹೋಗುವ ರೈಲಿನಲ್ಲಿ ಕುಳಿತು ಡೈಸ್ಸಿಸಾವ್‌ಗೆ ಹೊರಟಿದ್ದೆ. ಎಂಟ್ಹತ್ತು ದಿನಗಳಲ್ಲಿ ಜರ್ಮನಿಯ ಊರುಗಳಲ್ಲಿ ಏಕಾಂಗಿಯಾಗಿ ಸುತ್ತುವ ಧೈರ್ಯ ಬಂದಿತ್ತು. ಹುಡುಗರು ಕೂಗಾಡುತ್ತ ರೈಲಿನಲ್ಲಿ ಹತ್ತುತ್ತಿದ್ದರು. ಇಳಿಯುತ್ತಿದ್ದರು. ಈ ಹುಡುಗರ ಕೂಗಾಟ, ಕೇಕೆ, ಕೇಕೆಯಿಂದೊಡ ಗೂಡಿದ ನಗು ಒಮ್ಮೊಮ್ಮೆ ತಾರಕಕ್ಕೇರುತ್ತಿತ್ತು. ಒಬ್ಬರನ್ನೊಬ್ಬರು ಕಿಚಾಯಿಸುತ್ತಿದ್ದರು. ಯಾವ ದೇಶವಾದರೇನು ಹುಡುಗರು ಹುಡುಗರೆ.

ಅಲ್ಬಾಕ್ಕೆ ಬಂದಾಗ ನಗಸುತ್ತಲು ಸಂಪೂರ್ಣ ಆವರಿಸಿ ದಾರಿ ಮಸುಕಾಗಿ ಕಾಣುತ್ತಿತ್ತು. ಡೈಸ್ಸಿಸಾವ್‌ಕಡೆಗೆ ಹೆಜ್ಜೆ ಹಾಕಿದೆ. ಮರ್ಲಿ ಹೇಳಿದ 'ಆಕ್ಸ' ಹೋಟೆಲಿನ ಪಕ್ಕದ ರಸ್ತೆಯ ಮೂಲಕ ಬೆಟ್ಟದ ಮೇಲೆ ಹೊರಟೆ. ಎಷ್ಟು ನಡೆದರೂ ಮನೆಯೇ ಬಾರದು! ನನಗೆ ದಿಗಿಲಾಯಿತು. ನಾನಂದುಕೊಂಡಂತೆಯೇ ಆಗಿತ್ತು. ಮಧ್ಯೆ ಒಂದು ಅಡ್ಡ ರಸ್ತೆಯಲ್ಲಿ ದಾರಿ ತಪ್ಪಿತ್ತು. ಆ ಗುಡ್ಡದ ಅನೇಕ ಕಿರುದಾರಿಗಳಲ್ಲಿ ಅಡ್ಡಾಡಿದೆ. ರಸ್ತೆ ತೋಚಲಿಲ್ಲ. ಯಾರನ್ನಾದರೂ ಕೇಳಬೇಕೆಂದರೆ ಆ ಸಮಯದಲ್ಲಿ ಹೊರಗಡೆ ಯಾರೂ ಕಾಣಲಿಲ್ಲ. ಜರ್ಮನ್ನರು ಮನೆಯ ಒಳಗಡೆ ಸೇರಿದರೆಂದರೆ ಸುಮ್ಮನೇ ಹೊರಗಡೆ ಬರುವದಿಲ್ಲ. ಗೇಟುಗಳಲ್ಲಿ ಹರಟೆ ಹೊಡೆಯುತ್ತಾ ನಿಲ್ಲುವದಿಲ್ಲ. ಕೊನೆಗೆ ನಡೆದು ನಡೆದು ಸುಸ್ತಾಗಿ ಯಾರನ್ನಾದರೂ ಕೇಳಿದರಾಯಿತೆಂದು ಅಳುಕುತ್ತಾ ಒಂದು ಮನೆಯ ಬಾಗಿಲನ್ನು ಬಡಿದೆ. ನಾಯಿ ಕಡಿದರೆ ? ಎಂಬ ಭಯ ಕಾಡಿತ್ತು. ಸಧ್ಯ. ಆ ಮನೆಯಲ್ಲಿ ನಾಯಿ ಇರಲಿಲ್ಲ. ಹದಿನೈದು ವರ್ಷದ ಹುಡುಗಿ ಬಾಗಿಲು ತೆರೆದಳು. ಅವಳಿಗೆ ನನಗೆ ಬೇಕಾದ ಮನೆಯ ವಿಳಾಸ ತೋರಿಸಿದೆ. ಇಂಗ್ಲಿಷ್ ಬಾರದ ಆ ಹುಡುಗಿ ಕೈ ಸನ್ನೆಯ ಮೂಲಕ 'ಗೊತ್ತಿಲ್ಲಾ' ಎಂದಳು. ಮತ್ತೆ ಹಾಗೆಯೇ ಕತ್ತಲಲ್ಲಿ ನಡೆದೆ. ರಸ್ತೆಯಲ್ಲಿ ಸುಮಾರು ಅರವತ್ತು ಪ್ರಾಯದ ಮಹಿಳೆ ಎದುರಾದಳು. ಅವಳಿಗೆ ಫ್ರಿಟ್ಜ್ ಅವರ ವಿಳಾಸ ತೋರಿಸಿ ಕೇಳಿದೆ. ಅವಳು ಕೂಡಾ ಕಣ್ಣು, ಬಾಯಿ, ಕೈ, ಕಾಲುಗಳನ್ನು ಆಡಿಸುತ್ತಾ ಏನನ್ನೋ ಜರ್ಮನ್ ಭಾಷೆಯಲ್ಲಿ ಹೇಳಿದಳು. ನನಗದರ ತಳಬುಡ ಅರ್ಥವಾಗಲಿಲ್ಲ. ಸಾಗುತ್ತಾ ಗುಡ್ಡದ ಒಂದು ಮೂಲೆಗೆ ಬಂದಿದ್ದೆ. ರಸ್ತೆ ದೀಪಗಳು ದೂರಕ್ಕೊಂದರಂತೆ ಮಿನುಗುತ್ತಿದ್ದವು. ಮನೆ ಹುಡುಕುವುದರಲ್ಲಿ ಎರಡು ಗಂಟೆ ಕಳೆದು ಹೋಗಿತ್ತು. ನನಗೆ ಆಯಾಸವಾಗಿತ್ತು. ಮನೆ ಸಿಕ್ಕೇ ಸಿಗುತ್ತದೆಂಬ ವಿಶ್ವಾಸ ದೂರವಾಗುತ್ತಿದ್ದರೂ ಮುಂದುವರೆದೆ. ಒಬ್ಬ ಮಹಿಳೆ ಸುಮಾರು

ಮುಂವತ್ನಾಲ್ಕು-ಮೂವತ್ತೈದು ವಯಸ್ಸಿರಬೇಕು, ಮಗಳನ್ನು ನಡೆಸುತ್ತಾ, ಆಡಿಸುತ್ತಾ ಈ ಕಡೆಗೇ ಬರುತ್ತಿದ್ದಳು. ಆಕೆಗೆ ನನ್ನ ತಾಪತ್ರಯ ತಿಳಿಸಿದೆ. ಜರ್ಮನ್ ಮಿಶ್ರಿತ ಇಂಗ್ಲಿಷ್‌ನಲ್ಲಿ ಆಕೆ ತನಗೆ ಆ ವಿಳಾಸ ಗೊತ್ತು, ಆದರೆ ಆ ಮನೆ ಬಹು ದೂರವಿದೆ ಎಂದಳು. ಕೊನೆಗೆ ನನ್ನನ್ನು ಕರೆದುಕೊಂಡು ಸಮೀಪವೇ ಇದ್ದ ತನ್ನ ಮನೆಗೆ ನಡೆದಳು ಮನೆಯಲ್ಲಿ ದೊಡ್ಡವರ ಹತ್ತಿರ ಮಗಳನ್ನು ಬಿಟ್ಟು ನನ್ನೊಡನೆ ಹೊರಟಳು. ಹಾಫ್ ಪ್ಯಾಂಟ್ ಹಾಗೂ ಬಿಳಿಯ ಶರ್ಟ್ ಧರಿಸಿದ್ದ ಆ ಮಹಿಳೆ ರೂಪವಂತೆ; ಅಷ್ಟೇ ಅಲ್ಲ ಗುಣವಂತೆ ಕೂಡ ಹೌದು ಎಂದಿತು ನನ್ನ ಮನ. ರಾತ್ರಿಯ ವೇಳೆ ಕತ್ತಲ ಹಾದಿಯಲ್ಲಿ ಇಬ್ಬರೂ ನಡೆದೆವು. ಗಂಡ ಡಾಕ್ಟರನೆಂದು ನೌಕರಿಯಲ್ಲಿರುವದಾಗಿ, ಮನೆ ನಿರ್ವಹಣೆಗಾಗಿ ತಾನೂ ಕೆಲಸ ಮಾಡುತ್ತಿರುವುದಾಗಿ ಹೇಳಿದಳು. ತನಗೆ ಒಬ್ಬ ಮಗಳು ಇರುವುದಾಗಿ ಹೇಳಿದಳು. ಇನ್ನೊಂದು ಮಗು ಹೊಟ್ಟೆಯಲ್ಲಿರುವುದು ಎಂಥ ಮಂದ ದೃಷ್ಟಿಯವನಿಗೂ ಗೋಚರವಾಗುವಷ್ಟು ಅವಳ ಹೊಟ್ಟೆ ಉಬ್ಬಿತ್ತು. ತುಂಬ ಆತ್ಮೀಯತೆಯಿಂದ ಮಾತನಾಡುತ್ತಾ, ನಾನು ಆ ದೇಶಕ್ಕೆ ಬಂದ ವಿಚಾರವಾಗಿ ಕೇಳಿದಳು. ತನ್ನ ತಾಯಿ ತನ್ನ ಮನೆ ಬಗ್ಗೆ ಎಲ್ಲ ಹೇಳಿದಳು. ಸುಮಾರು ಒಂದು ಮೈಲುದ್ದ ನಡೆದ ಮೇಲೆ ಇವ್‌ಗವಾರ್ ರಸ್ತೆ ಕಂಡಿತು. ನನ್ನನ್ನು ಸ್ಲೋಪ್ ಅವರ ಮನೆಯ ಮುಂದೆ ಬಿಟ್ಟು ಆತ್ಮೀಯತೆಯಿಂದ ಕೈ ಕುಲುಕಿದಳು. ತಾನು ಒಬ್ಬ ವ್ಯಕ್ತಿಗೆ ಸಹಾಯ ಮಾಡಿದ ತೃಪ್ತಿ ಅವಳ ಕಣ್ಣುಗಳಲ್ಲಿ ಮಿನುಗುತ್ತಿತ್ತು. ನಾನು ನಿಂತಿದ್ದಂತೆಯೇ ಮತ್ತೆ ಅಷ್ಟು ದೂರ ದಾರಿ ಸವೆಸಲು ಅವಳು ಹೊರಳಿದಳು.

ಮನೆಗೆ ಬಂದು ಶ್ರೀಮತಿ ಮರ್ಲಿ ಅವರಿಗೆ ನಾನು ದಾರಿ ತಪ್ಪಿಸಿಕೊಂಡಿದ್ದನ್ನು, ಮನೆ ಹುಡುಕಲು ಗೋಳಾಡಿದ್ದನ್ನು, ತರುಣಿ ನೆರವಾದುದನ್ನು ಹೇಳಿದೆ. ಅವರು ಎಂದಿನಂತೆ ಗಟ್ಟಿಯಾಗಿ ಧ್ವನಿಮಾಡಿ ನಕ್ಕರು. ತುಂಬು ಗರ್ಭಿಣಿ ಇದ್ದ ಆ ಮಹಿಳೆ ಅಪರಾತ್ರಿಯಲ್ಲಿ ಮಗುವನ್ನು ಬೇರೆಯವರ ಬಳಿ ಬಿಟ್ಟು ಮೈಲುದ್ದದ ರಸ್ತೆಯನ್ನು ನಡೆದು ಮಾಡಿದ ಸಹಾಯ ನನಗಿನ್ನೂ ಇದೀಗ ನಡೆದ ಘಟನೆಯಂತೆ ನೆನಪಿಗೆ ಬರುತ್ತದೆ. ಮನಸ್ಸಿನಲ್ಲಿ ಯಾವುದೇ ಮಾಲಿನ್ಯ ಇರದ ಇಂಥ ಜನರಲ್ಲಿ ಮಾತ್ರ ಇಂಥ ನಡವಳಿಕೆಯನ್ನು ಕಾಣಲು ಸಾಧ್ಯ ಎಂದಿತು ನನ್ನಂತರಂಗ.

*

ನಾನು ಬ್ರಿಟಿಷ್ ಕಲಾ ಮಂದಿರದಲ್ಲಿ ವಿಶ್ವದ ಅನೇಕ ಸಂಸ್ಕೃತಿಗಳ ಸಾರವನ್ನು ಕಂಡಿದ್ದೆ. ನಾ ಕಂಡ ಅದ್ಭುತ ಸಾಂಸ್ಕೃತಿಕ ಜಗತ್ತಿನಲ್ಲಿ ಸಂಪೂರ್ಣ ತನ್ಮಯನಾಗಿದ್ದೆ. ಹಸಿವೆ ನೀರಡಿಕೆಗಳ ಚಿಂತೆ ಕಾಡಲಿಲ್ಲ. ಕಾಲ ಕಳಗಿನ ಕಾಲ ಮಾತ್ರ ಉರುಳಿ ಸಂಜೆಯಾಗುತ್ತ ಬಂದಿತ್ತು. ಈಜಿಪ್ಟಿನ ಮೃತ್ಯು ಶಾಸನಗಳನ್ನು, ಪ್ರಸಿದ್ಧ ಮಮ್ಮಿಗಳನ್ನು

ನೋಡಲು ಮೂರನೇ ಅಂತಸ್ತಿಗೆ ಹೆಜ್ಜೆ ಹಾಕಿದೆ. ಬಣ್ಣ ಬಣ್ಣದ ಪೆಟ್ಟಿಗೆಯಲ್ಲಿ ಶವಗಳು ಮೌನವಾಗಿ ಮಲಗಿದ್ದವು. ಎಷ್ಟೆಲ್ಲ ಮೃತ್ಯು ಶಾಸನಗಳು! ಈಜಿಪ್ತಿನ ಜನರು ನಂಬಿದ್ದ ಹುಟ್ಟು ಸಾವಿನ ಅರ್ಥಗಳ ಲೋಕವೊಂದರಲ್ಲಿ ಬಂದು ನಿಂತಿದ್ದೆ. ಬಣ್ಣ ಬಣ್ಣದ ಚಿತ್ರಗಳ ಮರದ ಪೆಟ್ಟಿಗೆಯಲ್ಲಿ ಕಮರಿಹೋದ ಮಾನವರ ಮೃತ್ಯು ಸಂಹಿತೆಗಳು. ಈ ಲೋಕದ ಆಟ ಮುಗಿಸಿದ ಅಸಂಖ್ಯಾತ ವಿಧದ ಚೇತನಗಳ ಶವಗಳ ಸಂಗ್ರಹ ಹುಟ್ಟು-ಸಾವಿನ ವಿಚಿತ್ರ ಲೋಕಕ್ಕೆ ನನ್ನನ್ನು ಕರೆತಂದಿತ್ತು. ಕರಗಿ ಉಳಿದ ಮೂಳೆಗಳು, ಕರಗದೇ ಉಳಿದವುಗಳು. ಶವದ ಮೂಳೆಗಳ ಎಕ್ಸರೇ ಚಿತ್ರಗಳೂ ಅಲ್ಲಿದ್ದವು. ನನ್ನ ಮನಸ್ಸು ಹುಟ್ಟು, ಸಾವಿನ ವಿಸ್ಮಯ ಲೋಕದಲ್ಲಿ ಅಡ್ಡಾಡುತ್ತಿತ್ತು. ಸರ್ಪಭೂಷಣ ಶಿವಯೋಗಿ, ನಿಜಗುಣ ಶಿವಯೋಗಿ, ಶಿಶುನಾಳ ಶರೀಫ್, ನೀರಲ ಕೆರೆ ಅಜ್ಜ, ಮಹಾಲಿಂಗರಂಗ, ಬಬಲಾದಿಯವರ ತತ್ವಪದಗಳು ನೆನಪಾಗತೊಡಗಿ ದವು. 'ನೀ ಎಲ್ಲಿಂದ ಬಂದಿ ಎಲ್ಲಿಗೆ ಹೊಂಟಿ' ಎಂಬ ಹಾಡಿನ ರಾಗ ತಲೆಯಲ್ಲಿ ಗುಂಯ್ ಗೊಡುತ್ತಿತ್ತು. ವೇದಾಂತಿಯಂತೆ ಮುನ್ನಡೆದೆ

*

ನಾಲ್ಕು ವಾರಗಳ ವರೆಗೆ ಈ ಬಿಳಿಯರ ನಾಡಿನಲ್ಲಿ ಭಿನ್ನ ಸಂಸ್ಕೃತಿಯಲ್ಲಿ ನಡೆದಾಡಿದ ನಾನು ಎಷ್ಟು ಕಾಲ ಇಲ್ಲಿದ್ದರೂ ಇವರಂತಾಗಲು ಸಾಧ್ಯವೆ? ಎಂದು ಯೋಚಿಸಿದೆ. ಸಾಧ್ಯವೂ ಇಲ್ಲ ಅಗತ್ಯವೂ ಇಲ್ಲ ಎನಿಸಿತು. ಮೈಗಂಟಿಕೊಂಡು ಬಂದ ನನ್ನ ಬಣ್ಣ ವಂಶವಾಹಿನಿಯಾಗಿ ಬಂದ ನನ್ನ ಆಕಾರದಿಂದಾಗಿ ಎಂದೂ ಇವರಂತಾಗಲು ಸಾಧ್ಯ ವಿಲ್ಲ. ಎಷ್ಟಾದರೂ ಈ ದೇಶಗಳಲ್ಲಿ ನಾನು ಎರಡನೆಯ ದರ್ಜೆಯ ಪ್ರಜೆಯೇ ಸರಿ. ಆದ್ದರಿಂದ ನನ್ನ ಬಣ್ಣದ ನನ್ನ ಆಕಾರದ ಜನರಿರುವ ನನ್ನ ನಾಡೇ ನನಗೆ ಸನಿಹ ಹಾಗೂ ಅನಿವಾರ್ಯ: ಈ ಬದುಕನ್ನು ನೋಡಿದ ಅನುಭವ ಮಾತ್ರ ನನ್ನದು ಎಂಬ ವಿಚಾರದಲ್ಲಿ ಯಾವಾಗ ಜೋಂಪು ಹತ್ತಿತೋ ತಿಳಿಯದು. ನಸುಕಿನಲ್ಲಿ ನಂದಕುಮಾರ ಎಬ್ಬಿಸಿದ. ಬೇಗ ಬೇಗನೇ ತಯಾರಾದೆ. ಅವನ ತಂದೆ ತಾಯಿಗಳಿಗೆ ವಂದನೆ ಸಲ್ಲಿಸುವ ಪತ್ರ ಬರೆದಿಟ್ಟು ಕಾರಿನಲ್ಲಿ 'ಹೀಥ್ರೂ' ವಿಮಾನ ನಿಲ್ದಾಣಕ್ಕೆ ಬಂದೆ. ದಾರಿಯಲ್ಲಿ ಇಬ್ಬರೂ ಮೌನ. ಮಾತನಾಡುವ ಧೈರ್ಯವಾಗಲಿಲ್ಲ. ದುಃಖದ ಕಟ್ಟೆಯೊಡೆದು ಪ್ರವಾಹ ನುಗ್ಗಿ ಎಲ್ಲಿ ಲಂಡನ್ ನಗರದಲ್ಲಿ ಜಲಪ್ರಳಯವಾಗುವುದೋ ಎಂಬ ಭಯ. ವಿಮಾನ ನಿಲ್ದಾಣದಲ್ಲಿ ನನ್ನನ್ನು ಇಳಿಸಿ ಮುಂದಿನ ಪ್ರಯಾಣಕ್ಕೆ ಶುಭ ಕೋರಿ ನಂದ ಕೈ ಕುಲುಕಿದ. ಕೈ ಗಳು ಬಲು ನಿಧಾನವಾಗಿ ಬೇರ್ಪಟ್ಟವು. ಕಾರಿನ ಕಡೆ ಮುಖಮಾಡಿ ಅವ ಸಾವಕಾಶವಾಗಿ ಹೆಜ್ಜೆ ಹಾಕಿದ. ನನಗೆ ಕಣ್ಣು ತುಂಬಿ ಬಂತು. ಅವನ ನಡಿಗೆಯ ದೃಶ್ಯವೇ ಮಸುಕಾಯಿತು. ವಿಮಾನ ಏರಿ ಕಿಡಕಿಗೆ ಒರಗಿ ಕುಳಿತೆ. ಹೊಸ ಸಂಸ್ಕೃತಿಯೊಂದರಲ್ಲಿ ದಾಪುಗಾಲಿನ ಹೆಜ್ಜೆ ಹಾಕುತ್ತಾ ನಡೆಯುತ್ತಿದ್ದ ಅವನ ಚಿತ್ರವೇ ನನ್ನ ಕಣ್ಮುಂದೆ. ●

# ಧರ್ಮ: ಪಾರಂಪರಿಕ ಮತ್ತು ವಾಸ್ತವಿಕ ನೆಲೆ

ಎಂ. ಆರ್. ಸುಂದಾರವಲ್ಲಿ

ಧರ್ಮದ ಬಗ್ಗೆ ಇರುವ ಅನೇಕ ವಾದಗಳ ನಡುವೆ ನನ್ನದೇ ಶ್ರೇಷ್ಠ, ತನ್ನದೇ ಉತ್ತಮ ಎಂಬ ಹೆಗ್ಗಳಿಕೆಗಳು ಸಹ ಇವೆ. ಹಿಂದು, ಕ್ರೈಸ್ತ, ಪಾರ್ಸಿ, ಇಸ್ಲಾಂ, ಜೈನ, ಬೌದ್ಧ ಇತ್ಯಾದಿ ಅನೇಕ ಧರ್ಮಗಳ ಜತೆಗೆ ಪ್ರತಿ ಧರ್ಮದಲ್ಲೂ ಅನೇಕ ಪಂಗಡಗಳು, ಒಂದೊಂದು ಪಂಗಡದಲ್ಲೂ ಮತ್ತಷ್ಟು ಗುಂಪುಗಳು. ಈ ಗುಂಪುಗಳಿಗೆಲ್ಲ ಮುಂದಾಳುಗಳು ಮತ್ತೆ, ಅವರವರ ನಡುವೆ ಕಿತ್ತಾಟಗಳು, ಈ ಕಿತ್ತಾಟಗಳು 'ಧರ್ಮಯುದ್ಧ' (!) ಆಗಿ, ಅದರಲ್ಲಿ ಅನೇಕ ಸಾವುಗಳು ಸಂಭವಿಸುತ್ತ (ತ್ತಿ)ವೆ. ಅತ್ಯಾಚಾರಗಳೂ ನಡೆಯುತ್ತ(ತ್ತಿ)ವೆ, ಎಲ್ಲ ಧರ್ಮಗಳ ಮುಖಂಡರುಗಳೂ 'ನಮ್ಮೆಲ್ಲರ ಧರ್ಮ ಒಂದೇ: ಅದು ಮಾನವೀಯತೆ' ಎಂದು ಕೂಗಿ ಹೇಳಿದರೂ ಸಹ, ಆ ಕೂಗು ಯಾರ ಕಿವಿಗೂ ಮುಟ್ಟುವದಿಲ್ಲ, ಯಾರ ಮನವನ್ನೂ ತಲುಪುವುದಿಲ್ಲ.

ಈ ಜಗಳಗಳು, ಸಂಪ್ರದಾಯ, ದೇವರು, ಉಡುಗೆ, ಆಭರಣ ಎಲ್ಲವನ್ನೂ ದಾಟಿ ಕೊಟ್ಟಕೊನೆಯಲ್ಲಿ ಅರಶಿನ ಕುಂಕುಮ ಹಚ್ಚುವವರೆಗೂ ಸಹ ತಲುಪಿಬಿಡುತ್ತವೆ. ಆನೆಗೆ ಹಚ್ಚಬೇಕಾದ ನಾಮ. ಪೂಜೆಗೆ ನೀಡಿದ ತೆಂಗಿನಕಾಯಿ ಹೋಳುಗಳು. ನಮ್ಮ ಭ(ಭು)ಕ್ತರನ್ನು ನ್ಯಾಯಾಲದ ತೀರ್ಪಿಗೆ ಕಾಯುವಂತೆ ಮಾಡಿತು.

ಹೀಗೆ ನಾವು ದೇವರು, ಧರ್ಮದ ಹೆಸರಿನಲ್ಲಿ ಎಲ್ಲಿಗೆ ಬೇಕಾದರು ಇಳಿದು ಕದನ ಕಾಯುತ್ತೇವೆ. ಹಾಗಾದರೇ, ಜಗಳವೇ ನಮ್ಮ ಧರ್ಮವೇ!

ಧರ್ಮದ ಬಗ್ಗೆ ನಮ್ಮ ಸಮಾಜದಲ್ಲಿ ವಿವೇಚನೆ ಮಾಡಹೊರಟ ಕೂಡಲೇ ವೇದ, ಉಪನಿಷತ್ತು, ಪುರಾಣ, ಪುಣ್ಯಾದಿಗಳನ್ನು ಉಲ್ಲೇಖಿಸುವ ಸಾವಿರಾರು ನಿದರ್ಶನಗಳಿದ್ದರೂ, ಇಂತಹ ಆತ್ಯಂತಿಕ ವಿಚಾರಗಳ ಬಗ್ಗೆ ಆಲೋಚಿಸುವಾಗೆಲ್ಲಾ

ಭಗವದ್ಗೀತೆಯು ಉಲ್ಲೇಖ ಅತ್ಯಂತ ಸಾಮಾನ್ಯ. 'ಗೀತೆಯಲ್ಲಿ ಕೃಷ್ಣನೇ ಹೀಗೆ ಹೇಳಿಲ್ಲವೇ ... ...' ಎಂದು ಮಾತಕ್ಕೆ ಆಧಾರವನ್ನು ತರುತ್ತೇವೆ. ಅದೇನೇ ಇರಲಿ, ನಮ್ಮ ದೇಶದ ಅನೇಕ ಮಹಾಪುರುಷರು ಅದನ್ನು ಶ್ರೇಷ್ಠವಾಗಿ ಪರಿಗಣಿಸಿರುವುದು. ನ್ಯಾಯಾಲಯಗಳಲ್ಲಿ ಈ ಭಗವದ್ಗೀತೆಯೇ ನಮ್ಮ ಸತ್ಯ ಸುಳ್ಳು ಹೇಳಿಕೆಗಳ ಸಾಕ್ಷಿ ಆಗುವುದು. ಮತ್ತು ಕೇವಲ ೧೮ ಅಧ್ಯಾಯ ಇರುವ ಈ ಪುಸ್ತಕದ ಮೇಲೆ ನೂರಾರು ಗ್ರಂಥಗಳು ಸೃಷ್ಟಿ ಆಗಿರುವುದು. ಹಾಗೇ ಇದರ ರಚನೆ ಎಷ್ಟೋ ಹಿಂದೆಯೇ ಆಗಿದ್ದರೂ ಸಹ ಸಾವಿರಾರು ವರುಷಗಳಿಂದ ಹಿಡಿದು ಇಂದಿನವರೆಗೆ ನಮ್ಮ ಮಾತು ಗಳಲ್ಲಿ ಆಧಾರ ರೂಪವಾಗಿ ಇರುವುದನ್ನು ನೋಡಿದರೆ ಅದರ ಮಹತ್ವಿನ ಕಲ್ಪನೆ ದೊರೆಯುತ್ತದೆ.

ಇಷ್ಟಾದರೂ ಅದನ್ನು ಒಪ್ಪುವ ಮತ್ತು ಒಪ್ಪದಿರುವ ಸಂಘರ್ಷ ನಮ್ಮಲ್ಲಿ ವ್ಯವಸ್ಥಿ ತವಾಗಿ ಬೆಳೆದುಬಂದಿದೆ. ಒಪ್ಪುವವರು ಒಪ್ಪದವರನ್ನು ನಾಸ್ತಿಕರು ಎಂದು ಹೇಳಿದರೆ, ಒಪ್ಪದವರು ಒಪ್ಪುವವರನ್ನು ಮೂರ್ಖರು. ಪೆದ್ದರು ಎಂದು ತಳ್ಳಿ ಹಾಕುತ್ತಾರೆ. ಕೆಲವರು ಅದಕ್ಕೆ ನಿಜವಾಗಿ ಏನೋ ಅರ್ಥ ಇದೆ. ನಮಗೆ ಅದು ಸರಿಯಾಗಿ ಅರ್ಥವಾಗಲಾರದು, ಹಾಗೆಂದ ಮಾತ್ರಕ್ಕೆ ತಳ್ಳಿ ಹಾಕಬಾರದು ಎಂದರೆ ಮತ್ತೆ ಕೆಲವರು ದೊಡ್ಡವರು ಹೇಳಿದ್ದೆಲ್ಲ ಸರಿಯಲ್ಲ, ಅವರವರಲ್ಲೇ ಭಿನ್ನಾಭಿಪ್ರಾ ಯಗಳು ಇರುವಾಗ ನಮಗೆ ಹೇಗೆ ಅರ್ಥವಾಗುತ್ತದೆ ಎಂದು ಸುಮ್ಮನಾಗುತ್ತಾರೆ. ಈ ಎಲ್ಲವನ್ನೂ ಕೇಳುವ ಒಂದು ಗುಂಪು ಅದರಲ್ಲೇನಿದೆ ನೋಡಿಬಿಡೋಣ ಎಂದು ಅದನ್ನು ಅರ್ಥೈಸಿಕೊಳ್ಳಲು ಪ್ರಯತ್ನಿಸುವುದೂ ಉಂಟು.

ಏನಾದರೂ, ಜನತೆ ನಂಬಿದ್ದ ದೇವರು, ಧರ್ಮ ಅವರುಗಳಿಗೆ ಮಾಡಿದ್ದಾದರೂ ಏನು? ಧರ್ಮವನ್ನೇ ಉಸಿರು ಇರುವವರೆಗೂ ಆಚರಿಸಿದವರ ಬದುಕು, ಅವರ ಹೆಂಡತಿ ಮಕ್ಕಳ ಜೀವನ ಪೂರಾ ಶೋಕಸಾಗರದಲ್ಲಿ ಮುಳುಗಲಿಲ್ಲವೇ? ಅನೇಕಾನೇಕ ಸಂಕಟ ಮಾಲೆಗಳೇ ಅವರನ್ನು ಕಾಡಲಿಲ್ಲವೇ!

ವರುಷಗಟ್ಟಲೇ ತಮ್ಮ ತಮ್ಮ ತಪಸ್ಸಿನಿಂದ ಅರಿಷಡ್ವರ್ಗಗಳನ್ನು ಗೆದ್ದು ಸಹನೆ, ಶಾಂತಿ, ದಯೆಗಳನ್ನು ಬೆಳಸಿಕೊಂಡ ಮುನಿಗಳು, ತಮ್ಮ ತಪಸ್ಸಿನ ಶಕ್ತಿಯನ್ನು ಅಬಲೆಯರನ್ನು, ಆದರ್ಶ ಸ್ತ್ರೀ ಪುರುಷರನ್ನು ಕಾಡಲು ಉಪಯೋಗಿಸಿಕೊಂಡರು. ಮತ್ತು ಅವರನ್ನು ಕಾಡುತ್ತಿದ್ದ ರಕ್ಕಸರಿಂದ ಬಿಡುಗಡೆ ಹೊಂದಲು ರಾಜರ ನೆರವೇ ಬೇಕಾಗುತ್ತಿತ್ತು ಅವರಿಗೆ. ಇದರ ಅರ್ಥ ಇಷ್ಟೇ: ವರುಷಗಟ್ಟಲೇ ಮಾಡಿದ ಅವರ ತಪಸ್ಸಿಗೆ ಅಸುರರನ್ನು ಕೊಲ್ಲುವ ಶಕ್ತಿ ಬರಲಿಲ್ಲ, ಬದಲಾಗಿ ಅಬಲೆಯರನ್ನು ಅಸ ಹಾಯಕರನ್ನು ಪೀಡಿಸುವ ಗುಣ ಬಂದಿತು. ಮತ್ತೆ ಕೆಲವರು, ತಪಸ್ಸು ಮಾಡಿದ

ದೇವರು ಪ್ರತ್ಯಕ್ಷ ಆದರೇ–ನಿನ್ನ ಹೆಂಡತಿಯನ್ನು ನನ್ನೊಂದಿಗೆ ಕಳಿಸು! ನನಗೆ ಲೋಕದಲ್ಲಿ ಸಾವು ಬರಲೇ ಬಾರದು! ಮೂರು ಲೋಕಗಳಿಗೆ ನಾನೇ ಒಡೆಯನಾಗ ಬೇಕು;...ಎಂಬ ವರಗಳನ್ನು ಕೇಳುತ್ತಾರೆ. ಬಹುಶಃ ಹೀಗೆಲ್ಲಾ ನಡೆದುಕೊಳ್ಳುವುದು ತಪಸ್ಸು ಮಾಡುವವರ ಧರ್ಮವೇ?

ಬೇಜವಾಬ್ದಾರಿತನ ಎನ್ನುವುದು ಎಂತೆಂತಹವರನ್ನು ಅಧೋಗತಿಗೆ ಇಳಿಸಿದೆ. ಅಂತಹ ವರನ್ನು ಗಂಡಂದಿರನ್ನಾಗಿ ಪಡೆದ ಸ್ತ್ರೀಯರು ಮಾರುಕಟ್ಟೆಯಲ್ಲಿ ಮಾರಲ್ಪಟ್ಟರು, ಗರ್ಭಿಣಿಯರಾಗಿ ಕಾಡಿಗೆ ಅಟ್ಟಲ್ಪಟ್ಟರು, ತುಂಬಿದ ಸಭೆಯಲ್ಲಿ ನಗ್ನರಾಗಿ ನಿಲ್ಲುವಂತಹ ಪರಿಸ್ಥಿತಿಯನ್ನು ಎದುರುಗೊಂಡರು. ಈ ಬೇಜವಾಬ್ದಾರಿತನ, ಒಣಪ್ರತಿಷ್ಠೆಗಳಿಗೆ 'ಧರ್ಮ'ವೆಂಬ ಹೆಸರನ್ನಿತ್ತರೂ ಕೂಡ ಅದು ಎಲ್ಲ ಕಾಲದಲ್ಲಿ, ಎಲ್ಲರ ಬಾಯಿಯಲ್ಲಿ ಹೆಗ್ಗಳಿಕೆಯ ಮಾತೇ ಆಗುವುದಿಲ್ಲ. ಮತ್ತು ಹೀಗೆಲ್ಲಾ ನಡೆದುಕೊಂಡ ಮಂದಿ ಹೇಳುವ ಬೋಧಿಸುವ ಧರ್ಮ ಎಲ್ಲ ಕಾಲದಲ್ಲಿ ಪರಮ ಪವಿತ್ರ ಆಗುವುದಾದರೂ ಹೇಗೆ?

ದೇವರಲ್ಲಿ ನಂಬಿಕೆ ಇರುವ, ಅಪಾರಶ್ರದ್ಧೆ ಇರುವ ಎಲ್ಲರೂ ಈ ಧರ್ಮವನ್ನು ಪ್ರೀತಿಯಿಂದ ಒಪ್ಪಿಕೊಳ್ಳುತ್ತಾರೆ. ಅವರ ದೃಷ್ಟಿಯಲ್ಲಿ ಎಲ್ಲವೂ ದೇವರ ಲೀಲೆ; ಅವನೇ ವರ ಕೇಳುವ ಮನಸ್ಸು ಕೊಡುವವನು, ಕಾಡುವವನು, ಬೇಡುವವನು, ಅನೇಕ ರೀತಿಯ ಅನುಭವ ನೀಡಿ ಮಾನವನಿಗೆ ಒಳ್ಳೆಯ ಬುದ್ಧಿ ಬರುವಂತೆ ಮಾಡುವವನು. ಅವರ ದೇವರು ಕಲ್ಲಿನಲ್ಲಿ, ಲೋಹದಲ್ಲಿ, ಮರದಲ್ಲಿ ಸುಂದರ ಮೂರ್ತಿಯಾಗಿ ಕುಳಿತಿರುತ್ತಾನೆಯೇ ಹೊರತು, ಎದುರಿಗೆ ಇರುವ ಜೀವಂತ ಮನುಷ್ಯರು ಅವರಿಗೆ ಎಂದೂ ದೇವರಾಗಲು ಸಾಧ್ಯವಿಲ್ಲ.

'ನಾನು ದೇವರನ್ನು ನೋಡಿದ್ದೇನೆ' ಎಂದು ಹೇಳುತ್ತಾ ಪವಾಡ ಮಾಡುವವರನ್ನು ನಂಬುವಂತಹ ಮತ್ತೊಂದು ಗುಂಪಿದೆ. ಈ ಗುಂಪಿನ ಜನರಿಗೆ ಪವಾಡ ಪುರುಷನಲ್ಲಿ ಇರುವಷ್ಟು ನಂಬಿಕೆ ಆ ದೇವರಲ್ಲಿ ಕೂಡ ಇಲ್ಲ. ಇವರು ಗುಡಿ, ದೇವಾಲಯಗಳಿಗೆ ಹೋಗುವುದಕ್ಕಿಂತಲೂ ಹೆಚ್ಚಾಗಿ ಆ 'ದೇವ ಮಾನವ'ರ ವಾಸಸ್ಥಾನಕ್ಕೆ ಹೋಗಿ ಬರುತ್ತಾರೆ.

ಈ ರೀತಿಯ ಭಾವನೆಗಳು, ಅಂಧಶ್ರದ್ಧೆ, ಮೂಢನಂಬಿಕೆಗಳು ದೊಡ್ಡ ದೊಡ್ಡ ಓದನ್ನು ಓದಿಕೊಂಡು, ಉತ್ತಮ ಸಂಸ್ಥೆಯಲ್ಲಿ ಗೌರವಾನ್ವಿತ ಹುದ್ದೆಯಲ್ಲಿರುವವರು, ಸಂಸ್ಥೆಯನ್ನು ನಡೆಸುವ ಹಿರಿಯ ಅಧಿಕಾರಿಗಳು, ವೈದ್ಯಕೀಯ, ಇಂಜಿನಿಯರಿಂಗ್ ವಿಜ್ಞಾನ ಮುಂತಾದ ಕ್ಷೇತ್ರಗಳಲ್ಲಿ ಪ್ರವೀಣತೆ ಹೊಂದಿರುವವರಲ್ಲಿ ಕೂಡ ಕಂಡುಬರುವುದು ಅತ್ಯಂತ ಶೋಚನೀಯ.

ಖ್ಯಾತ ವಿಚಾರವಾದಿ ಪ್ರೇಮಚಂದ್, ವಿಜ್ಞಾನಿಯ ಮಗ, ಚಿಕ್ಕಂದಿನಲ್ಲಿ ತಂದೆಯ ಪ್ರಯೋಗಶಾಲೆಯ ಉಷ್ಣಮಾಪಕವನ್ನು ಒಡೆದದ್ದರ ಕಾರಣದಿಂದ ತಂದೆಯಿಂದ ಪೆಟ್ಟು ತಿಂದರು. ಅದರ ಪಾದರಸವನ್ನು ಒಂದು ಅಲ್ಯೂಮಿನಿಯಂ ತಟ್ಟೆಯಲ್ಲಿಟ್ಟಿದ್ದರು. ತಂದೆ ತಟ್ಟೆಯನ್ನು ಚೆನ್ನಾಗಿ ತೊಳೆದಿಡಲು ಹೇಳಿದರು. ಆದು ಮಾಡುತ್ತಿದ್ದಂತೆ ಹುಣಸೇಹಣ್ಣನ್ನು ಹಾಕಿ ಪ್ರೇಮಚಂದ ಅದನ್ನು ತೊಳೆದಿಟ್ಟರು. ಸ್ವಲ್ಪ ಹೊತ್ತಿನ ನಂತರ ತಟ್ಟೆಯಲ್ಲಿ ಬೂದಿಯಂತಹ ವಸ್ತು ಕಂಡುಬಂದಿತು. ಅದನ್ನು ಪುನಃ ತೊಳೆದು ಚೆನ್ನಾಗಿ ಒರೆಸಿಟ್ಟರು. ತಂದೆ, ಮಗ ನೋಡುತ್ತಿದ್ದಂತೆಯೇ ತಟ್ಟೆಯಿಂದ ಬೂದಿಯಂತಹ ವಸ್ತು ಚಿಮ್ಮಲು ಪ್ರಾರಂಭ ಆಯಿತು. ತಂದೆ ವಿಜ್ಞಾನಿ ಆದರೂ, ಅತೀಂದ್ರಿಯ ಶಕ್ತಿ, ಪವಾಡಗಳ ಬಗ್ಗೆ ನಂಬಿಕೆ ಇದ್ದುದರಿಂದ, ತನ್ನ ಮಗನಿಗೆ ದೇವರು ಒಲಿದಿದ್ದಾನೆ. ಅವನಿಗೆ ತಾನು ಹೊಡೆದದ್ದರಿಂದ ದೇವರು ತಮಗೆ ಈ ರೀತಿಯಾಗಿ ಎಚ್ಚರಿಕೆ ಹೇಳುತ್ತಿದ್ದಾನೆ ಎಂದು ಭಾವಿಸಿದರು. ಮಗನನ್ನೇ ಕ್ಷಮೆ ಕೇಳಿದರು. ಸ್ವತಃ ಪ್ರೇಮಚಂದ್ ಕೂಡ ಹಾಗೇ ಅಂದುಕೊಂಡಿದ್ದರು. ಆದರೆ ಅಲ್ಯೂಮಿನಿಯಂ ಮತ್ತು ಪಾದರಸದ ನಡುವೆ ರಾಸಾಯನಿಕ ಕ್ರಿಯೆ ನಡೆದು ಅಲ್ಲಿ ಅಲ್ಯೂಮಿನಿಯಂ ಕ್ಲೋರೈಡ ಉತ್ಪತ್ತಿ ಆಗಿತ್ತು.

ಯೋಗಿಗಳ ಒಡನಾಟ, ಪವಾಡಪುರುಷರ ಸಹವಾಸ, ವಿಷಯ ಜ್ಞಾನ, ಸ್ವಂತ ಶಕ್ತಿ, ವಿವೇಚನೆ, ಬುದ್ಧಿಶಕ್ತಿಗಳನ್ನೇ ಅಡವಿಡವಂತಹ ಮನೋದೌರ್ಬಲ್ಯತೆ ಇವುಗಳು ಅವರಿಗೆ ಇಂತಹ ವೈಜ್ಞಾನಿಕ ಸತ್ಯಗಳನ್ನು ಸ್ವಾರ್ಥಕ್ಕಾಗಿ ಬಳಸುವ ಪವಾಡ ಪುರುಷರ, ಯೋಗಿಗಳ ಗುಟ್ಟನ್ನೇ ತಿಳಿಸಿಕೊಟ್ಟವು. ಪ್ರಯತ್ನ ಪಟ್ಟಿದ್ದರೆ ಇವರೇ ಅವರಂತಹ ಒಬ್ಬ ಪವಾಡ ಪುರುಷ ಆಗಬಹುದಿತ್ತೇನೊ! ಆದರೆ, ಪ್ರಾಮಾಣಿಕತೆ ಮತ್ತು ಆತ್ಮ ಸಾಕ್ಷಿ ಅವರಿಗೆ ಹಾಗೆ ನಡೆಯಲು ಅವಕಾಶ ನೀಡಲಿಲ್ಲವೆನಿಸುತ್ತದೆ. ಇರಲಿ. ಅಂತೆಯೇ ವಿಷಯಗಳು ತಿಳಿಯುತ್ತಾ ಹೋದಂತೆ ತಾನೇ ಎಲ್ಲರಂತೆ ಒಬ್ಬ ಸಾಮಾನ್ಯ ಮನುಷ್ಯ ಎಂಬ ಅರಿವು ಬಂದಿತು ಅವರಿಗೆ ಹೀಗೆಯೇ ಅವರು ಶೋಧಿಸುತ್ತಾ ಹೊರಟಂತೆ ಪವಾಡ ಪುರಷರ 'ಜಾದೂ'ಗಳು ಬಿಚ್ಚಿಕೊಳ್ಳುತ್ತಾ ಹೊರಟವು. ಪ್ರೇಮಚಂದ ಮತ್ತು ಇತರ ವಿಚಾರವಾದಿಗಳು ಪವಾಡಪುರುಷರ ಗುಟ್ಟನ್ನೇ ಬಹಿರಂಗ ಮಾಡುತ್ತ ಜಗತ್ತಿನ ಮುಂದೆ ಇದ್ದರೂ ಸಹ ಅದನ್ನು ಕೇವಲ ವಿಚಾರವಾದಿಗಳು ಹಾಗೂ ಮುಗ್ಧ ಜನರು ನಂಬಿದರೇ ಹೊರತು ಆ ದೇವಮಾನವರ ಹಿಂಬಾಲಕರಲ್ಲ. ಅವರು ಎಷ್ಟು ಮೂಢರಾಗುತ್ತಾರೆ ಅಂದರೆ ದೇವಮಾನವ ಗಾಳಿಯಲ್ಲಿ ಕೈ ಆಡಿಸಿ ಒಂದು ವಸ್ತು ತೆಗೆದರೆ 'ಪವಾಡ' ಎನ್ನುತ್ತಾರೆ ಮತ್ತು ಐಂದ್ರಜಾಲಿಕ ವೇದಿಕೆಯ ಮೇಲೆ ಅದೇ ಕೆಲಸ ಮಾಡಿದರೆ 'ಜಾದೂ' ಎನ್ನುತ್ತಾರೆ. ಮನಸ್ಸಿನಲ್ಲಿ ಬೆಳೆಸಿಕೊಂಡ ಭಾವನೆಗಳನ್ನೇ ಕಿತ್ತೊಗೆಯಲು ಇಷ್ಟವಿಲ್ಲದೆ ವಿಷಯ

ವನ್ನು ತಿಳಿಯಲು ಹೋದಾಗ ನಾವು ಸತ್ಯದಿಂದ ದೂರವಾಗುತ್ತಾ ನಡೆಯುತ್ತೇವೆ. ಮತ್ತೆ ಇದರಿಂದ ದಿಗ್ಭ್ರಮಿತರಾಗುತ್ತೇವೆ. ಹೀಗ ಸತ್ಯ, ಪ್ರಾಮಾಣಿಕತೆಯಿಂದ ದೂರ ಸರಿಯುವ ನಾವು ನಮ್ಮ ಮುಂದಿನ ಪೀಳಿಗೆಗೆ ಕೊಡುವುದಾದರೂ ಏನು ? ಅನ್ಯಾಯ, ಸುಳ್ಳು, ಮೋಸಗಳನ್ನು. ಕೇವಲ ನಮ್ಮ ನಂಬಿಕೆಗೆ ಚ್ಯುತಿಯಾಗಬಾರದು ಎಂಬ ಒಂದೇ ಕಾರಣಕ್ಕಾಗಿ, ನಮ್ಮ ವಂಶದ ಕುಡಿಗಳಿಗೆ ಅದನ್ನೇ ಬೋಧಿಸುವುದು ಧರ್ಮವೇ !

ಸಾಮಾನ್ಯವಾಗಿ ಧರ್ಮದ ಪ್ರಶ್ನೆ ಕಾಡುವುದು ಸಮಸ್ಯೆ ಎದುರಾದಾಗ. ಯಾವುದಾದರೊಂದು ಸಮಸ್ಯೆ ಭೂತಾಕಾರ ತಾಳಿ ಎದುರು ನಿಂತರೆ ತಕ್ಷಣ ಅವನ ಎಲ್ಲ ಸಂಬಂಧಿಕರೇ ಅವನ ಬಾಂಧವ್ಯದ ಧರ್ಮ ಬೋಧಿಸುತ್ತಾರೆ. ಪುತ್ರಧರ್ಮ, ಪತಿಧರ್ಮ, ಸೋದರ ಧರ್ಮ, ಪಿತೃಧರ್ಮ, ಮಾತೃಧರ್ಮ ... ... ಹೀಗೆ ಒಬ್ಬನೇ ವ್ಯಕ್ತಿ ಬೆಳೆಯುತ್ತಾ ಬಂದಂತೆ ಬಾಂಧವ್ಯ ವಿಸ್ತಾರವಾಗುತ್ತಾ ನಡೆದಂತೆ ಧರ್ಮಗಳು ಅಂಟಿಕೊಳ್ಳುತ್ತಾ ಹೋಗುತ್ತವೆ. ಆದರೇ ಒಬ್ಬನೇ ವ್ಯಕ್ತಿ ಎಲ್ಲರಿಗೂ ಹೇಗೆ ನ್ಯಾಯ ಕೊಡಲು ಸಾಧ್ಯ ? ಕೇವಲ ಗಂಡಿಗೆ ಮಾತ್ರವಲ್ಲ ಇದು ಹೆಣ್ಣಿಗೆ ಸಹ ಕಾಡುವ ಪ್ರಶ್ನೆ. ಬದುಕಿನುದ್ದಕ್ಕೂ ಕಾಡುವ ಈ 'ಧರ್ಮ' ಸಮಸ್ಯೆಯಾಗಿಬಿಟ್ಟರೆ ಬದುಕು ಸಂತಸದಿಂದ ಅರಳುವುದಾದರೂ ಹೇಗೆ ! ಅದಕ್ಕೆ ಉತ್ತರ ಹುಡುಕುವುದೇ ಜೀವನವಾದರೆ ವೈಯಕ್ತಿಕ ಅಭಿರುಚಿ, ಆಸಕ್ತಿ, ಪ್ರತಿಭೆ, ಬಯಕೆ ಇವುಗಳ ಈಡೇರಿಕೆಯಾದರೂ ಯಾವಾಗ ?

ಧರ್ಮ ಎಂಬುದು ಮತವಾಗಿ, ದೇವರಾಗಿ, ನಂಬಿಕೆಯಾಗಿ, ಪವಾಡವಾಗಿ, ಲೀಲೆಯಾಗಿ, ಅಂಧಶ್ರದ್ಧೆಯಾಗಿ, ಬೂಟಾಟಿಕೆ ತಂತ್ರವಾಗಿ, ಆಸ್ತಿಕವಾಗಿ, ನಾಸ್ತಿಕವಾಗಿ, ಗೋಜಲಾಗಿ ಎಲ್ಲರೊಡನೆ ಬೆರೆತಿದೆ. ವಿಷಾದವೆಂದರೆ ಚಿಲ್ಲರೆ ತಂತ್ರ ಮತ್ತು ವಿಚಾರಗಳೇ ನಿಜವಾದ ಧರ್ಮ ಎಂಬ ಮುಖವಾಡ ತೊಟ್ಟು, ಅದರೊಳಗೆ ಸತ್ತವರು, ಇದ್ದವರು, ಹುಟ್ಟಿದವರು, ಹುಟ್ಟಬೇಕಾದವರು ಎಲ್ಲರೂ ಉಸಿರುಗಟ್ಟುತ್ತಿದ್ದಾರೆ. ಆದ್ದರಿಂದ ಆ 'ಧರ್ಮ' ಎಂದರೇನು ? ಯಾರು ಯಾವ ಧರ್ಮವನ್ನು ಅನುಸರಿಸಬೇಕು ಎಂಬುದನ್ನು ಅರಿಯಬೇಕಿದೆ. ವಿಶೇಷವೆಂದರೆ, ಧರ್ಮದ ನಿಜವಾದ ಹೂರಣವು ನಮ್ಮ ಪರಂಪರೆಯಲ್ಲಿಯೇ ಇದೆ. ಅದರ ಕುರಿತ ಭಕ್ತಿ ಮತ್ತು ನಿರ್ಲಕ್ಷ್ಯ ಎರಡೂ ಸತ್ಯ ದೊರಕಿಸವು. ಒಂದು ವಿಚಾರವನ್ನು ಪೂರ್ತಿ ಅರಿಯಂದೇ ನಂಬುವುದು ಹೇಗೆ ತಪ್ಪು ಫಲಿತಾಂಶಕ್ಕೆ ಎಡೆಮಾಡಿಕೊಡುತ್ತದೋ ಅದನ್ನು ಸರಿಯಾಗಿ ಗ್ರಹಿಸದೆ ತಿರಸ್ಕರಿಸುವುದು ಆ ವಿಚಾರಕ್ಕೆ ಮತ್ತು ವಿಚಾರವಾದಿಗೆ ಅವಮಾನ ಮಾಡಿದಂತೆ. ಆದ್ದರಿಂದ ಎಷ್ಟೋ ಸಮಸ್ಯೆಗಳ ಹುಟ್ಟಿಗೆ ಕಾರಣ ಆಗಿರುವ ಆ 'ಧರ್ಮ' ಎಂದರೇನು ಎಂದು ನೋಡುವಾ,

'ಧರ್ಮ' ಎಂದರೆ, ಧರಿಸಬಲ್ಲದ್ದು; ಯಾವುದನ್ನು ಪಾಲಿಸಿದರೆ ಅದು ನಮ್ಮನ್ನು ಪಾಲಿಸುತ್ತದೋ ಯಾವ ಕಟ್ಟುಪಾಡುಗಳು ನಮ್ಮನ್ನು ಕಾಪಾಡುತ್ತದೆಯೋ ಅದು ಧರ್ಮ.

'ಧರಿಸಬಲ್ಲದ್ದು' ಧರ್ಮ ಎಂದರೆ, ನಾವೇನನ್ನು ಧರಿಸುತ್ತೇವೆಯೋ ಅದು ಎಂದರ್ಥ. ಆದರೆ, ಅದು ಉಡುಪಾಗಿರಬಹುದು, ಮನೋಭಾವವಿರಬಹುದು, ಅಂತಃಸತ್ವ ಆಗಿರಬಹುದು, ಸಮಯಕ್ಕೆ ತಕ್ಕಂತಹ ವೇಷಗಳಾಗಬಹುದು ... ... ಏನೇ ಆಗ ಬಹುದು ಅದು ಧರ್ಮ. ಈ ಜಗತ್ತಿನ ಪ್ರತಿವಸ್ತುವಿಗೂ ಅವರದೇ ಆದ ಗುಣ, ಪ್ರಕೃತಿ, ಪ್ರವೃತ್ತಿ ಇರುತ್ತದೆ. ಮತ್ತು ಅದು ಏನನ್ನೇ ಧರಿಸಿದರೂ ಸಹ ಈ ಪ್ರಕೃತಿ, ಪ್ರವೃತ್ತಿ ಮತ್ತು ಗುಣಗಳಿಗೆ ಅನುಗುಣವಾಗಿಯೇ ಇರುತ್ತದೆ. ಮತ್ತು ಅದೇ ಧರ್ಮ. ಉದಾಹರಣೆಗೆ ಗಾಳಿಗೆ ಬೀಸುವ ಗುಣ. ನೀರಿಗೆ ಹರಿಯುವ ಗುಣ, ಬೆಂಕಿಗೆ ಸುಡುವ ಗುಣ...... ಹೀಗೆ. ಆದರೆ ಅವುಗಳ ಈ ಗುಣಗಳು ಆಯಾ ಪರಿಸರಕ್ಕೆ ತಕ್ಕಂತೆ, ಭೌಗೋಳಿಕ ಗುಣಗಳಿಗೆ ಅನುಸಾರವಾಗಿ ಬದಲಾಗಲೂಬಹುದು. ಬೀಸುವ ಗಾಳಿ ಕೆಲವು ಸ್ಥಳಗಳಲ್ಲಿ, ಒಂದು ಹಂತವನ್ನು ಮೀರಿದಾಗ ತಟಸ್ಥವಾಗಬಹುದು ಅಥವಾ ಸುಂಟರ ಗಾಳಿ, ಚಂಡಮಾರುತವೂ ಆಗಬಹುದು. ಹಾಗೆಯೇ ಹರಿಯುವ ನೀರು ಬಾವಿಯಲ್ಲಿ, ಕೆರೆಯಲ್ಲಿ, ಕೊಳಚೆಗಳಲ್ಲಿ ಯಾವುದೇ ರೀತಿಯ ಹರಿಯುವಿಕೆ ಇಲ್ಲದೇ ಇರಬಹುದು...... ಹೀಗೆಂದ ಮಾತ್ರಕ್ಕೆ ಅವುಗಳ ಮೂಲಗುಣ, ಪ್ರವೃತ್ತಿಗಳಲ್ಲಿ ಬದಲಾವಣೆ ಇರಲು ಸಾಧ್ಯವೇ ? ಆದ್ದರಿಂದ, ಧರ್ಮ ಎಂದರೆ ಅವರವರ ಪ್ರಕೃತಿ, ಪ್ರವೃತ್ತಿ ಮತ್ತು ಗುಣಗಳಿಗನುಸಾರವಾಗಿ ಏನನ್ನು ಧರಿಸುತ್ತಾರೆಯೋ ಅದು– ಎಂದು ಹೇಳಬಹುದಲ್ಲವೇ ?

"ಯಾವುದನ್ನು ಪಾಲಿಸಿದರೆ ಅದು ನಮ್ಮನ್ನು ಪಾಲಿಸುತ್ತದೆಯೋ ಅದು ಧರ್ಮ ! ಯಾವ ಕಟ್ಟು ಪಾಡುಗಳು ನಮ್ಮನ್ನು ಕಾಪಾಡುತ್ತವೆಯೋ ಅದು ಧರ್ಮ!"
ಧರ್ಮ 'ಧರಿಸಬಲ್ಲದು' ಎಂದಾದ ಮೇಲೆ ನಾವೆಲ್ಲರೂ ಧರ್ಮದಿಂದಲೇ ಇದ್ದೇವೆ ಎಂದು ಹೇಳಬಹುದು. ಕಳ್ಳ ಕಳ್ಳತನ ಮಾಡಿದರೆ, ಕೊಲೆಗಾರ ಕೊಲೆ ಮಾಡು ತ್ತಾನೆ; ದುಡಿದು ತಿನ್ನುವವ ದುಡಿದು ತಿಂದರೆ, ತುಳಿದು ತಿನ್ನುವವ ತುಳಿದು ತಿನ್ನು ತ್ತಾನೆ; ಹೀಗೆಂದ ಮೇಲೆ ಅಧರ್ಮ ಎಲ್ಲಿದೆ! ಯಾವುದು ಅಧರ್ಮ ?

ಮೂಲ ಪ್ರವೃತ್ತಿಯನ್ನು ಪಾಲಿಸುವುದರ ಮೂಲಕ ಅದು ನಮ್ಮನ್ನು ಪಾಲಿಸುತ್ತದೆ! ಅಂದರೆ ಉದಾಹರಣೆಗೆ-ಸ್ತ್ರೀ, ಆಕೆಯ ಲಾಸ್ಯ, ನಾಚಿಕೆ, ಲಜ್ಜೆ, ವಿನಯ, ಮೆಲು ನುಡಿ, ಮೃದು ನಗು... ಹೀಗೆ ಅನೇಕ ಗುಣಗಳನ್ನು ಹೊಂದಿದ್ದರೆ ಅದು ಸ್ತ್ರೀತ್ವಕ್ಕೆ

ಶೋಭಾಯಮಾನವಾಗಿರುತ್ತದೆ, ಹೌದು ತಾನೇ! ಒಂದುವೇಳೆ ಅವಳು ಈ ಎಲ್ಲವನ್ನೂ ಮೀರಿ ಅವಕ್ಕೆ ತದ್ವಿರುದ್ಧವಾದ ಗುಣಗಳನ್ನು ಹೊಂದಿದರೆ, ಪಾಲಿಸಿದರೆ, ಆಕೆಯನ್ನು 'ಗಯ್ಯಾಳಿ' ಎನ್ನದೇ ವಿಧಿ ಇಲ್ಲ. ಹಾಗೆಯೇ ಆಪತ್ತು ಬಂದಾಗ ಈ ಮೂಲಭೂತ ಗುಣಗಳೇ ಶ್ರೇಷ್ಠ ಎಂದು ಅದನ್ನೇ ಪಾಲಿಸಿದರೆ ಅವರು ನಾಶವಾಗುವುದು ಖಂಡಿತ. ಏಕೆಂದರೆ ಈ ಮೂಲ ಪ್ರವೃತ್ತಿಗಳೊಳಗೆ ಧೈರ್ಯ, ಸಮಯಸ್ಫೂರ್ತಿ, ಬುದ್ಧಿವಂತಿಕೆ, ವಿಚಾರಶಕ್ತಿ ಎಲ್ಲವೂ ಅಡಗಿವೆ. 'ಎಲ್ಲಿ ಯಾವುದನ್ನು ಪಾಲಿಸಿದರೆ ಅಲ್ಲಿ ಅದು ನಮ್ಮನ್ನು ಪಾಲಿಸುತ್ತದೆಯೋ ಅದು ಧರ್ಮ'. ವೇದಿಕೆಯ ಮೇಲೆ ನಿಂತು ಮಾತನಾಡಲು ಹೊರಟ ಮಹಿಳೆ ಮೆಲುನುಡಿಯಲ್ಲಿ ಮಾತನಾಡುತ್ತಾ, ಮೃದು ನಗು ನಗುತ್ತಾ, ವೈಯ್ಯಾರದಿಂದ ನಿಂತರೆ ಅದು ಶೋಭೆಯೇ ? ಸಂದರ್ಭವನ್ನು ತಿಳಿದು, ತನ್ನ ಮೂಲ ಪ್ರವೃತ್ತಿ ಅರಿತು ಹೆಜ್ಜೆ ಇಟ್ಟಾಗ ಆ ಪ್ರವೃತ್ತಿಯೇ ನಮ್ಮನ್ನು ಕಾಪಾಡುತ್ತದೆ. ಹಾಗೆಯೇ ಮಾನವನಿಗೆ ಮನುಷ್ಯತ್ವ ಎನ್ನುವುದು ಧರ್ಮ. ಈ ಮನುಷ್ಯತ್ವದಲ್ಲಿ ದಯೆ, ಕರುಣೆ, ಅನುಕಂಪ, ಸಹಾನುಭೂತಿ, ಅಂತಃಕರಣಗಳು ತುಂಬಿರುವಂತೆಯೇ ಬುದ್ಧಿಶಕ್ತಿ, ವಿಚಾರಶಕ್ತಿ, ಸಮಯಜ್ಞಾನ, ಶೂರತನ, ಕಾಠಿಣ್ಯ, ಒರಟುತನ, ಗಡಸು ಮಾತು, ಕಲ್ಲು ಹೃದಯಗಳೂ ಸಹ ಇವೆ. ಸಮಾಜದಲ್ಲಿ ಆಯಾ ವಿಭಾಗಗಳಿಗೆ ತಕ್ಕಂತೆ ಆಯಾ ಮನೋಧರ್ಮವನ್ನು ಹೊಂದಬೇಕಾದುದು ಅಗತ್ಯ. 'ಕಳ್ಳ ಕಳ್ಳತನ ಮಾಡಿದ' ಎಂದರೆ ಆ ಕಳ್ಳ ಸಾಮಾನ್ಯ ಪ್ರಜೆಯೇ ಅಥವಾ ಗುಪ್ತದಳ ವಿಭಾಗದವನೋ ಎಂಬುದು ಪ್ರಶ್ನೆಯಾಗುತ್ತದೆ. ಕೊಲೆ ಮಾಡಿದವ ಒಬ್ಬ ಮಾಮೂಲಿ ಪ್ರಜೆಯೋ ಅಥವಾ ಕಾನೂನು ರೀತಿ, ನಿಯೋಜಿಸಲ್ಪಟ್ಟ ಅಧಿಕಾರಿಯೋ ಎಂಬುದು ಪ್ರಶ್ನೆಯಾಗುತ್ತದೆ. ಮತ್ತೆ ಅದೆಲ್ಲದರ ಜತೆಗೇ ಆ ಕಾರ್ಯಗಳ ಹಿಂದಿರುವ ಉದ್ದೇಶ ಒಳಿತಿಗೋ ಕೆಡುಕಿಗೋ ಎಂಬುದೂ ಮುಖ್ಯವಾಗುತ್ತದೆ. **ಹಾಗಾಗೀ ಮೂಲ ಪ್ರವೃತ್ತಿಯನ್ನೇ ಎಲ್ಲಿ ಪಾಲಿಸುತ್ತೇವೆಯೋ ಅದು ಸರಿಯಾದ ಸ್ಥಳವಾಗಿದ್ದರೆ ಆ ಪ್ರವೃತ್ತಿಯೇ ನಮ್ಮನ್ನು ಕಾಪಾಡುತ್ತದೆ.**

ಧರ್ಮಕ್ಕೆ ಮೂರು ಲಕ್ಷಣಗಳಿವೆ. 'ನೈಜ, ನ್ಯಾಯ, ಮೈತ್ರಿ'. ಇವನ್ನೇ ಧರ್ಮದ ಕಟ್ಟುಪಾಡುಗಳು ಎನ್ನಬಹುದು. ಮತ್ತೆ ಈ ಕಟ್ಟುಪಾಡುಗಳನ್ನು ಪಾಲಿಸಿದರೆ ಅದು ಅಂದರೆ, ಆ ಧರ್ಮ, ನಮ್ಮನ್ನೇ ಕಾಪಾಡುತ್ತದೆ.

ನೈಜ—ಎಂದರೆ ಪ್ರಕೃತಿದತ್ತವಾದ ಸ್ವಭಾವ, ಪ್ರವೃತ್ತಿ. ಉದಾ: ಈ ಹಿಂದೆ ಹೇಳಿದ ಗಾಳಿಯ ಬೀಸುವ ಗುಣ, ನೀರಿನ ಹರಿಯುವ ಗುಣ......ಇತ್ಯಾದಿ

ನ್ಯಾಯು—ಎಂದರೆ, ಒಂದರ ನೈಜತೆಗೆ ಮತ್ತೊಂದರ ನೈಜತೆ ತೊಂದರೆ ಕೊಡ ಬಾರದು. ಉದಾ: ಗಾಳಿಯು ಬೀಸುವ ಗುಣ ಕೆರೆಯಲ್ಲಿರುವ ನೀರನ್ನು ಕೆರೆಯಿಂದಾಚೆ ದಬ್ಬುವಂತೆ ಮಾಡಬಾರದು.

ಮೈತ್ರಿ-ಎಂದರೆ. ಒಂದರ ನೈಜತೆ ಮತ್ತು ನ್ಯಾಯು ಲೋಕಕ್ಕೆ ಉಪಕಾರ ಆಗುವುದು. ಸುಡುವ ಬೆಂಕಿಯಿಂದ ಆಹಾರ ತಯಾರಾಗುವಂತೆ, ನಿಜವಾದ ದೀನರು ದಾನಿಗಳಿಂದ ಉಪಕೃತರಾಗುತ್ತಾರೆ.

ಆದ್ದರಿಂದ. ಯಾರು ಯಾವುದೇ ಧರ್ಮವನ್ನು ಪಾಲಿಸಲಿ, ಅದರಲ್ಲಿ ಈ ಮೂರು ಲಕ್ಷಣಗಳನ್ನು ಇರುವಂತೆ ನೋಡಿಕೊಳ್ಳಬೇಕಾದುದು ಅವಶ್ಯಕ. ಹಾಗಾಗದಿದ್ದಲ್ಲಿ ಅದು ಅಧರ್ಮ ಆಗುತ್ತದೆ.

**'ಸ್ವಧರ್ಮದಲ್ಲಿ ಸತ್ತರೂ ಚಿಂತೆ ಇಲ್ಲ, ಪರಧರ್ಮ ಅಂಗೀಕಾರ ಮಾಡ ಬಾರದು'** ಭಗವದ್ಗೀತೆಯ ಈ ವಾಕ್ಯ ಅನೇಕ ಜನರನ್ನು ಕೆರಳಿಸಿದೆ.

ಧರ್ಮ ಎಂದರೇನು ಎಂಬುದನ್ನು ಅರಿತ ನಂತರ ಈ ವಾಕ್ಯದ ಅರಿವು ಆಗಲು ನಮಗೆ ಬಹಳ ಕಷ್ಟವೇನೂ ಆಗಲಾರದು. ಉದಾ: ಬೆಂಕಿಯು ಉರಿಯುವ ಗುಣ ನೀರಿನಂತೆ ತಂಪು ಧರ್ಮವನ್ನೇ ಹೊಂದಿದರೆ? ಬೀಸುವ ಗಾಳಿಯ ಗುಣ ಕಲ್ಲಿನಂತೆ ಒಂದೇ ಕಡೆ ತಟಸ್ಥ ಆದರೆ? ತಂಪಾಗಿ ಹರಿಯುವ ನೀರು ಬೆಂಕಿಯಂತೆ ಸುಡುವಂತಹ ಗುಣವನ್ನು ಹೊಂದಿದರೆ ? ... ... ಆಗುವ ಅನಾಹುತಗಳನ್ನು ಪಟ್ಟಿ ಮಾಡಲಾಗು ವುದೇ? ಪ್ರತಿಯೊಬ್ಬರೂ ತಮ್ಮ ಮೂಲಗುಣ, ಪ್ರವೃತ್ತಿ, ಸ್ವಭಾವಗಳನ್ನೇ ಅರಿತು ಆ ಧರ್ಮವನ್ನು ಆಚರಿಸಿದರೆ ಅದು 'ಸ್ವಧರ್ಮ' ಎನ್ನಿಸಿಕೊಳ್ಳುತ್ತದೆ ಮತ್ತು ಮತ್ತೊಬ್ಬರದನ್ನು ಗುರುತಿಸಿ ಅನುಕರಿಸಲು ಹೋಗಿ ಅದನ್ನೇ ಆಚರಣೆಯಾಗಿಸಿದರೆ ಅದು 'ಪರಧರ್ಮ' ಆಗುತ್ತದೆ. ಅಂದರೆ, ಯಾವ ಹಿಂದು, ಮುಸ್ಲಿಂ, ಕ್ರೈಸ್ತ ಧರ್ಮಗಳೂ ಇಲ್ಲಿ ಸ್ವಧರ್ಮ ಅಥವಾ ಪರಧರ್ಮ ಆಗಲು ಸಾಧ್ಯವಿಲ್ಲ.

ಸ್ವಧರ್ಮ ಮತ್ತು ಪರಧರ್ಮ ಯಾವುದು ಹಿತ?

ಸ್ವಧರ್ಮವನ್ನು ಆಚರಿಸಿದಾಗ; ಪ್ರಕೃತಿ ಸಹಾಯ, ಕಾರ್ಯಶೀಘ್ರ, ಲೋಕಕ್ಕೆ ಹೆಚ್ಚು ಉಪಕಾರ. ಸ್ವಧರ್ಮಗುಣ ಧೃಡವಾಗಿ ಬೆಳೆಯುತ್ತದೆ.

ಪರಧರ್ಮ ಆಚರಿಸಿದಾಗ ಸ್ವಧರ್ಮಕಾರ್ಯ ಸ್ಥಗಿತ, ಅದರ ಸಾಮರ್ಥ್ಯಕುಂದು ವುದು. ಹೊಸದು ಸಂಪಾದನೆಯು ಭರವಸೆ ಇಲ್ಲ. ಹೊಸಧರ್ಮ ಕಲಿಕೆಗಾಗಿ ಸಮಯ ವ್ಯರ್ಥ.

ಮೇಲಿನ ಈ ಫಲಿತಾಂಶಗಳನ್ನು ನೋಡಿದರೆ ಯಾಕಾಗಿ ಪರಧರ್ಮ ಆಚರಿಸಬೇಕು ಎಂಬ ಪ್ರಶ್ನೆ ಮೂಡುತ್ತದೆ. ಒಬ್ಬ ಚಿತ್ರಕಾರ ಮತ್ತು ಸಂಗೀತಗಾರರನ್ನು ಉದಾಹರ

ಣೆಗೆ ತೆಗೆದುಕೊಂಡರೆ ಚಿತ್ರಕಾರ ತನ್ನ ಈ ಮೂಲ ಪ್ರವೃತ್ತಿಗೇ ಹೆಚ್ಚು ಪ್ರಶಸ್ತ ಕೊಟ್ಟು ಕಲೆಯನ್ನು ದುಡಿಸಿದಾಗ ಅತ್ಯುತ್ತಮ ಚಿತ್ರಕಾರನಾಗುವುದರ ಭರವಸೆ ಇರುತ್ತದೆ ಹಾಗೆಯೇ ಸಂಗೀತಗಾರ ತನ್ನ ಗಾನವನ್ನೆ ದುಡಿಸಿಕೊಂಡರೆ ಶ್ರೇಷ್ಠ ಗಾಯಕನಾಗುವ ಭರವಸೆ ಇರುತ್ತದೆ. ಅವೆರಡೂ ಸ್ವಧರ್ಮ ಪಾಲಿಕೆಯಿಂದ ಉಂಟಾಗಬಹುದಾದ ಶ್ರೇಯಸ್ಸು, ಯಶಸ್ಸು. ಒಂದು ವೇಳೆ ಪರಧರ್ಮ ಆಚರಣೆ ನಡೆದರೆ, ಅಂದರೆ ಚಿತ್ರಕಾರ ಗಾನಕಲೆ ರೂಢಿಸಿಕೊಳ್ಳುವುದು ಅಥವಾ ಗಾನಕಾರ ಚಿತ್ರಕಲೆಯನ್ನು ರೂಢಿಸಿಕೊಳ್ಳುವುದು ಆದರೆ ಅದರಿಂದ ಆಗುವ ಪರಿಣಾಮಗಳು ಇಬ್ಬರಿಗೂ ಯಶಸ್ಸನ್ನು ತರಲಾರವು. ಮತ್ತು ಭಾಗಶಃ ಅವರ ಬದುಕೇ ಮುಗಿದಂತೆ ಆಗಬಹುದು. ಇದು ಕೇವಲ ಉದಾಹರಣೆಗೆ ತೆಗೆದುಕೊಂಡದ್ದು. ಚಿತ್ರಕಾರನಿಗೆ ಸಂಗೀತ ಜ್ಞಾನ ಇರಬಾರದು ಎಂತೇನಿಲ್ಲ; ಹಾಗೆಯೇ ಸಂಗೀತಗಾರನಿಗೆ ಚಿತ್ರಕಲೆಯೇ ಒಲಿದಿರಬಾರದೂ ಎಂದೇನು ಇಲ್ಲ.

ಕುಟುಂಬದ ಸದಸ್ಯತ್ವದಲ್ಲಿ ಒಂದು ಧರ್ಮವಿದೆ. ಅದೇ ಗೃಹಧರ್ಮ. ಪ್ರತಿ ಸದಸ್ಯನೂ ಕುಟುಂಬದಲ್ಲಿ ತನ್ನ ಸ್ಥಾನವನ್ನು ಅರಿತು ಅದಕ್ಕೆ ತಕ್ಕಂತಹ ಜವಾಬ್ದಾರಿಯುತ ನಡೆ ಇರಬೇಕಾದುದು ಗೃಹಧರ್ಮ. ತಮ್ಮ ಸ್ವಭಾವಗಳಿಂದ ಕುಟುಂಬದ ಅಭಿವೃದ್ಧಿಗೆ ಧಕ್ಕೆ ತರುತ್ತಿದ್ದರೆ. ಕುಟುಂಬದ ಜನರಿಗೆ ಹೊರೆಯಾದರೆ ಅದು ಅಧರ್ಮ. ಗಂಡ–ಹೆಂಡತಿ, ಅಕ್ಕ–ತಂಗಿ, ಅಣ್ಣ–ತಮ್ಮ, ತಂದೆ–ತಾಯಿ, ಅತ್ತೆ–ಮಾವ ... ... ಯಾರೇ ಆಗಲೀ, ಎಲ್ಲರೂ ತಮ್ಮ ತಮ್ಮ ಪ್ರವೃತ್ತಿಗಳನ್ನು ಗುರುತಿಸಿ ಆ ಮೂಲಕ ಕುಟುಂಬದ ಅಭಿವೃದ್ಧಿಗೆ ಸಹಾಯ ಮಾಡಬೇಕು. ಹಾಗಿಲ್ಲದೇ ಕುಟುಂಬಕ್ಕೆ ಬಾಧಕ ತರುತ್ತಾ, ಎಲ್ಲ ಕಾರ್ಯಗಳಿಗೆ ವಿಘ್ನ ತರುತ್ತಿದ್ದರೆ ಅಂತಹವರನ್ನು ತ್ಯಜಿಸುವುದು ಸೂಕ್ತ ಮತ್ತು ಉತ್ತಮ. ಏಕೆಂದರೆ ಹೀಗೆ ಅಡ್ಡಿ ಉಂಟುಮಾಡುವುದೇ ಅವರ ಧರ್ಮ ಆಗಿದ್ದರೆ. ಬೇಜವಾಬ್ದಾರಿತನ ಅವರ ಮೂಲ ಪ್ರವೃತ್ತಿ ಆದರೆ, ಆತ ಕುಟುಂಬದ ಮುಖ್ಯಸ್ಥಾನದಲ್ಲಿ ಇದ್ದರೆ, ಆತನನ್ನೆ ಆ ಸ್ಥಾನದಿಂದ ಇಳಿಸಬೇಕಾದುದು ಎಲ್ಲರ ಗುರಿ ಆಗಬೇಕು.

ಇದೇ ನಿಯಮ ರಾಷ್ಟ್ರಧರ್ಮಕ್ಕೂ ಸಹ ಅನ್ವಯವಾಗುತ್ತದೆ. ರಾಷ್ಟ್ರನಾಯಕ ಬೇಜವಾಬ್ದಾರಿಯುತ, ಬುದ್ಧಿಹೀನ, ವಿವೇಚನಾ ಶೂನ್ಯ ಆಗಿ ಅವನ ಹೇತುಗಳು ರಾಷ್ಟ್ರದ ಅವನತಿಗೆ ಕಾರಣ ಆಗುತ್ತಾ ಹೊರಟರೆ ಆತನನ್ನು ಅಲ್ಲಿಂದ ಇಳಿಸಬೇಕಾದುದು ಪ್ರಜೆಗಳ ಧರ್ಮ. ಆದರೆ, ಪ್ರಜೆಗಳೂ ತಮ್ಮ ತಮ್ಮ ಧರ್ಮ ಮರೆತು ಅಸಹಾಯಕರಾಗಿ ಕುಳಿತರೆ, ಬೇಜವಾಬ್ದಾರಿಗಳಾದರೆ, ಮನೆ ಮನೆಯಲ್ಲಿ, ಚಾಕು ಚೂರಿಗಳು, ಸೀಮೆ ಎಣ್ಣೆ ಡಬ್ಬಿಗಳು, ಬೆಂಕಿಕಡ್ಡಿಗಳು ಅಬಲೆಯರನ್ನೂ, ದುರ್ಬಲರನ್ನೂ ಕೊಲ್ಲು

ತ್ರವೆ. ಘಡುತ್ತವೆ. 'ಧರ್ಮ'ಕ್ಕಾಗಿ ಕಿಂಚಿತ್ತೂ ವಿಚಾರ ಮಾಡದವ ನಾಡು, ಗಡಿ, ಭಾಷೆಗಳ ವಿಷಯ ಬಂದಕೂಡಲೇ ಎದ್ದು ನಿಲ್ಲುತ್ತಾನೆ. ಜಾತಿ, ದೇವರುಗಳ ಮಾತು ಬಂದರೆ ಹೋರಾಟ ನಡೆಸುತ್ತಾನೆ ದೇಶ,ದೇಶಗಳಿಗೆ ಹಬ್ಬುವ ಈ ಕದನದಲ್ಲಿ ಫಿರಂಗಿಗಳು ಮಾತನಾಡುತ್ತವೆ. ಅಂತಿಮವಾಗಿ ರಕ್ತದ ಓಕುಳಿ ಉಳಿಯುತ್ತದೆ. ಇದು ನಮ್ಮ ಮಾನವಧರ್ಮ!

ಈ ರೀತಿಯ ಹೋರಾಟಗಳು ಮಾನವೀಯತೆಗೆ ಜೀವ ತುಂಬುವುದಿಲ್ಲ. ಒಂದು ಪ್ರಾಣಿ ಅಶಕ್ತವಾಗಿ ಬಿದ್ದಾಗ ರಣಹದ್ದುಗಳು, ಕ್ರೂರ ಮೃಗಗಳು ಅದರ ಸಾವಿಗಾಗಿ ಕಾದು ಕೂರುತ್ತವೆ. ಒಮ್ಮೆ ಅದು ಕೊನೆಯುಸಿರೆಳೆಯಿತೋ ಇಲ್ಲವೇ ಅದರ ಮೇಲೆ ಎರಗುತ್ತವೆ, ತಮ್ಮೊಳಗೆ ಕಿತ್ತಾಡುತ್ತವೆ...ಇದು ಅವುಗಳ ಧರ್ಮ. ಮಾನವ ಸುತ್ತ ಹಾರುತ್ತಿರುವ ಹದ್ದುಗಳನ್ನು ನೋಡುತ್ತಾ ಸುಮ್ಮನೆ ಕೂರುವ ಬದಲು, ಅಥವಾ ಅವನ್ನು ಓಡಿಸುವ ಪ್ರಯತ್ನ ಮಾಡುತ್ತಾ, ಮಾಡುತ್ತಲೇ ಇರುವ ಬದಲು ಅಶಕ್ತ ಪ್ರಾಣಿಗೆ ಸೂಕ್ತ ಚಿಕಿತ್ಸೆ ನೀಡಿ ಆಹಾರ ನೀಡಿದರೆ ಅದು ಧರ್ಮ. ಮತ್ತು ಒಮ್ಮೆ, ಕೆಳಗೆ ಬಿದ್ದ ಪ್ರಾಣಿಗೆ ಶಕ್ತಿ ಬಂದರೆ ಅದು ಯಾರ ನೆರವಿನ ಅಗತ್ಯವೂ ಇಲ್ಲದೇ ಎದ್ದು ನಿಲ್ಲುತ್ತದೆ. ನಮ್ಮ ನೈಜ ಗುಣಗಳು, ಮಾನವೀಯ ಮೌಲ್ಯಗಳು, ಧರ್ಮ ಎಲ್ಲಕ್ಕೂ ಹುಳು ಹಿಡಿದು ಸೊರಗಿ ಕೆಳಗೆ ಬಿದ್ದಿವೆ. ದುಷ್ಟ ಶಕ್ತಿಗಳನ್ನು ಬೈಯುತ್ತಾ ಜನ ತಮ್ಮ ಇರುವ ಸಾಮರ್ಥ್ಯವನ್ನು ಕಳೆದುಕೊಂಡಿದ್ದಾರೆ. ಸಾಯುತ್ತಿರುವ ಮೌಲ್ಯಗಳಿಗೆ ಉಸಿರು ನೀಡಿದರೆ ಧರ್ಮ ತಾನು ಉಳಿಯುತ್ತದೆ, ನಮ್ಮನ್ನು ಉಳಿಸುತ್ತದೆ.

ಹೀಗೆ, ಧರ್ಮ ಎಂಬುದು ಪ್ರತಿ ವ್ಯಕ್ತಿಯೂ ಅನೇಕ ಕಡೆಗಳಲ್ಲಿ, ಅನೇಕ ರೀತಿಗಳಲ್ಲಿ ನಿರ್ವಹಿಸಬೇಕಾದ ಹೊಣೆ. ಈ ಹೊಣೆ ಅರಿತು ತನ್ನ ಧರ್ಮ ನಡೆಸಿದಾಗ ಖಂಡಿತ ಆತನ ಅಭಿವೃದ್ಧಿ ಆಗುವುದರಲ್ಲಿ ಆಶ್ಚರ್ಯವಿಲ್ಲ.

ಈ ಹಿನ್ನೆಲೆಯಲ್ಲಿ ಕೆಲವು ಶ್ಲೋಕಗಳನ್ನು ಅರ್ಥೈಸಿ ಕೊಳ್ಳುವಾ.

> ಯದಾ ಯದಾ ಹಿ ಧರ್ಮಸ್ಯ, ಗ್ಲಾನಿರ್ಭವತಿ ಭಾರತ
> ಅಭ್ಯುತ್ಥಾನಂ ಅಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ
> ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತ
> ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ
>
> ||ಭ. ಅ. ೪ ಶ್ಲೋ.|೮||
>
> ಸರ್ವ ಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ|

ಅಹಂ ತ್ವಾಂ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚ:

॥ಭ.ಅ.। ಶ್ಲೋ. ೬೬॥

ಇವುಗಳ ಸಾಮಾನ್ಯ ಅರ್ಥಗಳು ಹೀಗಾಗುತ್ತವೆ.

ಧರ್ಮವು ಅವನತಿ ಹೊಂದಿ, ಅಧರ್ಮವು ತಲೆ ಎತ್ತಿದಾಗಲೆಲ್ಲ, ದುಷ್ಟರನ್ನು ನಾಶ ಮಾಡಿ, ಸಜ್ಜನರನ್ನು ಕಾಪಾಡುವುದಕ್ಕಾಗಿ, ಧರ್ಮವನ್ನು ಸಂಸ್ಥಾಪಿಸುವುದಕ್ಕಾಗಿ ನಾನು ಪ್ರತಿಯುಗದಲ್ಲೂ ಅವತರಿಸುತ್ತಲೇ ಇದ್ದೇನೆ.

ಎಲ್ಲ ಧರ್ಮಗಳನ್ನೂ ಪರಿತ್ಯಜಿಸಿ ನನ್ನನ್ನು ನಂಬು. ನಾನು, ನಿನ್ನನ್ನು ಎಲ್ಲ ಪಾಪ ಗಳಿಂದ ಮುಕ್ತನನ್ನಾಗಿಸಿ ಮೋಕ್ಷ ನೀಡುತ್ತೇನೆ.

ಹೀಗೆ ಅರ್ಥೈಸಿದ ಅರ್ಥಗಳಿಗೆ ವಿವರಣೆ ನೀಡುವಾಗ ಆತ್ಮ ಅನಂತವಾಗಿ, ಅವಿನಾಶಿ ಆಗಿ, ನಾನು–ಭಗವಂತನಾಗಿ, ಕೃಷ್ಣನಾಗಿ ಕಂಡುಬರುತ್ತದೆ. ಹಾಗೂ ಇಲ್ಲಿ ಧರ್ಮವು ಆಚರಣೆ, ಪಂಥ, ದೇವರು, ಮತ ... ... ಏನಾದರೂ ಆಗುವ ಸಂಭವ ಇದೆ. ಮತ್ತು ಈ ಅರ್ಥಗಳನ್ನಿಟ್ಟುಕೊಂಡು ಶ್ಲೋಕವನ್ನು ವಿವರಿಸಿದಾಗ **'ಆಸ್ತಿಕ ಛಾಯೆ'** ಕಂಡುಬರುವುದರಲ್ಲಿ ಯಾವ ಸಂಶಯವೂ ಇಲ್ಲ. ಹಾಗೆಯೇ 'ಪಾಪ' ಮತ್ತು 'ಮೋಕ್ಷ' ಪದಗಳು 'ನರಕ' ಮತ್ತು 'ಸ್ವರ್ಗ'ವನ್ನು ಬಿಂಬಿಸಿದರೆ ಆಶ್ಚರ್ಯವಿಲ್ಲ.

ಆದರೆ, ಇವುಗಳನ್ನು ನಮ್ಮ ಚಿಂತನೆಯಲ್ಲಿ ತೂಗಿ ನೋಡಿದಾಗ, ಆತ್ಮ–ಎಲ್ಲ ಪ್ರಾಣಿ ಗಳ ಅಂತಃಸ್ಸತ್ವವಾಗಿ, ನಾನು–ಎಂಬುದು ಎಲ್ಲರೊಳಗಿರುವ ಅಭಿಮಾನವಾಗಿ, ಪಾಪ–ಎಂಬುದು ಜೀವಿ ಅನುಭವಿಸುವ ಕಷ್ಟವಾಗಿ, ಮೋಕ್ಷ-ಎಂಬುದು ಜೀವಿ ಅನು ಭವಿಸುವ ನೆಮ್ಮದಿಯಾಗಿ ಕಂಡುಬರುತ್ತದೆ. ಹಾಗೂ ಈ ಎಲ್ಲವನ್ನೂ ಒಳ ಗೊಂಡಂತಹ ನಮ್ಮ ಪ್ರವೃತ್ತಿ ಅಥವಾ ಧರ್ಮ ಎಂಬುದು ಈ ಎಲ್ಲ ಶ್ಲೋಕಗಳಿಗೂ ಬೇರೆಯದೇ ಆದ ವಿವರಣೆ ನೀಡುತ್ತದೆ. ಅಂದರೆ,

"ನಮ್ಮ ಪ್ರವೃತ್ತಿಗಳಿಗೆ, ನೈಜ ಸ್ವಭಾವಗಳಿಗೆ ಧಕ್ಕೆ ಒದಗಿ ಅಸಹಜ ಪ್ರವೃತ್ತಿಗಳು ತಲೆ ಎತ್ತಿದಾಗಲೆಲ್ಲ, ದುಷ್ಟ ಪ್ರವೃತ್ತಿಗಳನ್ನು ದಮನ ಮಾಡಲು, ಸಹಜವಾದ, ಲೋಕೋಪಕಾರವಾಗುವಂತಹ ಪ್ರವೃತ್ತಿಗಳನ್ನು ಜನರನ್ನು ಉಳಿಸಲು ನನ್ನ (ವ್ಯಕ್ತಿಯ) ಅಭಿಮಾನ ಜಾಗೃತಿಗೊಳ್ಳುತ್ತದೆ. ಅವತರಿಸುತ್ತದೆ. ಇದಕ್ಕೆ ನನ್ನ (ವ್ಯಕ್ತಿಯ) ಅಂತಸ್ಸತ್ವ ಪ್ರೇರೇಪಿಸುತ್ತದೆ. ಇದು ಪ್ರತಿಯುಗದಲ್ಲೂ ನಡೆಯುತ್ತಲೇ ಇದೆ." ಎಂದು ಹೇಳಬಹುದು. ಹಾಗೆಯೇ...

"ಎಲ್ಲ ಪ್ರವೃತ್ತಿಗಳನ್ನೂ ಬಿಟ್ಟು ಅಭಿಮಾನವನ್ನು ಶರಣು ಹೊಂದು. ಆ ಅಭಿಮಾ ನವು ನಿನ್ನನ್ನು (ವ್ಯಕ್ತಿಗೆ) ಎಲ್ಲ ಕಷ್ಟಗಳಿಂದ ದೂರಮಾಡಿ ನೆಮ್ಮದಿಯನ್ನು ಕೊಡು ತ್ತದೆ." ಎಂದು ಹೇಳಬಹುದು.

ಇದನ್ನು ಹೀಗೆ ಅರ್ಥೈಸಿದಾಗ ಅದರ ಫಲಿತಾಂಶವನ್ನು ನಾವು ಎದುರಿನಲ್ಲೇ ಕಾಣ
ಬಹುದು. ಎಲ್ಲರಿಂದ ಶತಮಾನಗಳಿಂದ ತುಳಿಸಿಕೊಂಡ ಮಹಿಳೆ ಇಂದು ಎಲ್ಲರಿಗೂ
ಸವಾಲಾಗುವಂತಹ ಮಟ್ಟವನ್ನು ತಲುಪಲು ಸಾಧ್ಯವಾಗಿ ಇರುವುದು; ಎಷ್ಟೋ
ವರುಷಗಳಿಂದ ಕೆಳಸ್ತರದಲ್ಲೇ ಇರುವಂತಾಗಿದ್ದ ದಲಿತರು ಇಂದು ಎಲ್ಲ ವರ್ಗ
ದಲ್ಲಿಯೂ ಪೋಟಿಗೆ ನಿಂತು ಸಫಲರಾಗುತ್ತಿರುವುದು; ನೂರಾರು ವರ್ಷಗಳ ಕಾಲ
ಆಂಗ್ಲರಿಂದ ಆಳಿಸಿಕೊಂಡ ಭಾರತದ ಜನತೆ ಇಂದು ಸ್ವತಂತ್ರವಾಗಿ ನಲಿಯುತ್ತಿ
ರುವುದು; ಎಲ್ಲವು ನಮ್ಮ ಕಣ್ಮುಂದೆ ನಿಲ್ಲುವಂತಾಗುತ್ತದೆ. ಜತೆಗೇ ವರ್ಣ ಭೇದ
ನೀತಿಯ ವಿರುದ್ಧ ಕರಿಯರ ಹೋರಾಟವನ್ನು ಸಹ ನೆನಪಿಗೆ ತಂದುಕೊಳ್ಳಬಹುದು.

ಈ ಎಲ್ಲವೂ ಆದುದು ಅವರವರ ಪ್ರವೃತ್ತಿಗಳಿಗೆ, ನೈಜಸ್ವಭಾವಗಳಿಗೆ ಧಕ್ಕೆಯಾಗಿ
ಅದರಿಂದ ಅವರಲ್ಲಿದ್ದ ಅಂತಃಸ್ಸತ್ವಕ್ಕೆ ನೋವಾಗಿ, ಅಭಿಮಾನ ಜಾಗೃತಿಗೊಂಡು
ಅವತರಿಸಿದ್ದರ ಫಲಿತಾಂಶ. ಇದು ಎಲ್ಲ ಕಾಲದಲ್ಲಿ, ಎಲ್ಲ ಯುಗದಲ್ಲಿ, ಎಲ್ಲರ
ಮನೆ, ಮನಗಳಲ್ಲಿ ನಡೆಯುವಂತಹುದು, ನಡೆಯುತ್ತಲೇ ಇರುವುದು. ಇದನ್ನು ಸೃಷ್ಟಿ
ಸಲು ಯಾವ ಕಾಣದ ದೇವರೂ ಭೂಮಿಗೆ ಇಳಿಯುವ ಅಗತ್ಯ ಇಲ್ಲ. ದೇವರು ಎಲ್ಲ
ರಲ್ಲೂ ಇದ್ದಾನೆ, ಎಲ್ಲರಲ್ಲಿ ಅಡಗಿದ್ದಾನೆ, ಯಾವ ರೂಪದಲ್ಲಿ ನೋಡುತ್ತೇವೋ ಆ
ರೂಪದಲ್ಲಿ ಕಾಣಿಸುತ್ತಾನೆ ಎಂಬ ಮಾತುಗಳನ್ನು ಸಹ ಈ ಹಿನ್ನೆಲೆಯಲ್ಲಿ ನೋಡಿದರೆ
ಸರಿಯಾಗಿ ಅರ್ಥೈಸಿಕೊಳ್ಳಬಹುದು.

ಈ ಚಿಂತನೆಗೆ ತೊಡಗಿದಾಗ ಮತ್ತೊಂದು ಮಾತನ್ನು ಹೇಳಬೇಕಿದೆ. ಅದೆಂದರೆ
ಕೃಷ್ಣ ತನ್ನನ್ನು ತಾನೇ 'ದೇವರು' ಎಂದು ಕರೆದುಕೊಂಡ ಎಂಬ ಹೇಳಿಕೆಗಳಿಗೆ,
ಅವನ ಅಸ್ತಿತ್ವವನ್ನು ಅಲ್ಲಗಳೆಯುವ ಅಥವಾ ಅವನೇ ದೇವರು ಎಂದು ಒಪ್ಪಿ
ಕೊಳ್ಳುವ ಮೊದಲು ಅವನ ಕಾಲ ಮತ್ತು ದೇಶದ ಬಗ್ಗೆ ೧೯೮೮ ರಲ್ಲಿ ನಡೆದ
'ದ್ವಾರಕೆಯ ಶೋಧನೆ'ಯ ಫಲಿತಾಂಶಗಳನ್ನು ನೋಡೋಣ. ಆತ ದೇವರಾಗಿದ್ದರೆ,
ಅಥವಾ ಅವನ ಕಾಲದಲ್ಲಿ ಜನರಿಗೆ ದೇವರ ಬಗ್ಗೆ ನಂಬಿಕೆ ಇದ್ದಿದ್ದರೆ ಅವನೇಕೆ
ಪವಾಡಗಳನ್ನು ಎಲ್ಲಿಯೂ ನಡೆಸಿಲ್ಲ? ಎಲ್ಲ ಕಡೆಯಲ್ಲಿ ಕೇವಲ ಮಾನವನಂತೆ ವರ್ತಿಸಿ
ದ್ದಾನೆ ಏಕೆ ? ಅಂದಿನ ದಿನಗಳಲ್ಲಿ ಇಂದು ಕಾಣುವಂತಹ ನೂರಾರು ದೇವರುಗಳ
ದೇವಾಲಯಗಳೇಕೆ ಕಂಡು ಬಂದಿಲ್ಲ ? ಕೇವಲ ಸೂರ್ಯನಾರಾಯಣ ದೇವಾಲಯ,
ಪ್ರಕೃತಿ ಪೂಜಾ ವಿಧಾನವನ್ನು ಕೆತ್ತಿರುವ ಕುಂಭ, ಪಂಚಭೂತಗಳು ಮೂರನ್ನು ಪ್ರತಿ
ನಿಧಿಸುವ ಮುದ್ರಿಕೆ, ಅಂದಿನ ಕಾಲದ ಲಿಪಿಯಲ್ಲಿ 'ಮಹಾಗಚ್ಛಪಾ' ಓ 'ಸಮುದ್ರವೇ
ನಮ್ಮನ್ನು ಕಾಪಾಡು' ಎಂದು ಬರೆದ ತಾಮ್ರದ ತಗಡು...ಇವುಗಳು ಲಭ್ಯವಾಗಿದ್ದು
ಇವೆಲ್ಲವೂ ಪ್ರಕೃತಿಯ ಬಗ್ಗೆ ಅಂದಿನ ಕಾಲದಲ್ಲಿದ್ದ ನಂಬಿಕೆಗಳ ಸಾಕ್ಷಿಗಳು. ಇಡೀ ಜನತೆ

ಯಲ್ಲಿ ದೇವರ ಬಗ್ಗೆ ಇಲ್ಲದ ಆ ಭಾವವನ್ನು ಹೊಸದಾಗಿ, ಅದೇ ಮಹಾಭಾರತ ಯುದ್ಧ ಸಮಯದಲ್ಲಿ, ರಣರಂಗದಲ್ಲಿ ನಿಂತು ಅದನ್ನು ಕೃಷ್ಣ ಹೇಳಲು ಸಾಧ್ಯವೇ ? ಅದುವರೆಗೆ ಅನೇಕ ಮಾನವ ತಂತ್ರಗಳಿಂದ ಜನತೆಯನ್ನೇ ಗೆದ್ದುಕೊಂಡವನು ಯುದ್ಧ ಸಮಯದಲ್ಲಿ ಮೂಢನಾಗಲು ಸಾಧ್ಯವೇ ? ಹಾಗೆಂದಕೂಡಲೇ ಅರ್ಜುನ ಅದನ್ನು ಒಪ್ಪಲು ಸಾಧ್ಯವೇ ?

ಧರ್ಮವನ್ನು ಕಂಡುಕೊಳ್ಳಲು ವಿವೇಕ ಮತ್ತು ಶೋಧನೆಯು ಅಗತ್ಯವಿದೆ. ಪ್ರತಿ ವ್ಯಕ್ತಿಯೂ ಬೇರೆ ಬೇರೆ ಕ್ಷೇತ್ರಗಳಲ್ಲಿ ನಡೆಯಬೇಕಾದ ಮಾರ್ಗ ಧರ್ಮ. ಕ್ಷೇತ್ರಗಳನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯ ಅವನಿಗಿದ್ದರೂ, ತನ್ನ ಮಿತಿಯನ್ನು ಅರಿತು ಅದಕ್ಕೆ ತಕ್ಕಂಥ ಕ್ಷೇತ್ರವನ್ನು ಆರಿಸಿದಾಗ ಮಾತ್ರ ಅವನ ಧರ್ಮವನ್ನು ಸರಿಯಾಗಿ ನಡೆಸಲು ಸಾಧ್ಯವಾಗುತ್ತದೆ. ಮತ್ತು ಆ ಧರ್ಮವನ್ನು ಅರಿತು ನಡೆಯಬೇಕಾದುದು ಅವರವರ ಹೊಣೆಯೂ ಕೂಡ ಹಾಗಾಗದಾಗ ಅವರ ಬದುಕಿನ ತುಂಬಾ ಬಿರುಕುಗಳು ಮೂಡುತ್ತವೆ. ಅವುಗಳಿಗೆ ತೇಪೆ ಹಚ್ಚಿ ಮುಚ್ಚುವ ಪ್ರಯತ್ನ ಮಾಡುವುದಕ್ಕಿಂತ, ಎಡವಿದ ಜಾಗವನ್ನರಿತು ಸರಿಪಡಿಸಿಕೊಂಡರೆ ಬಿರುಕುಗಳು ತಾವಾಗಿಯೇ ಮಾಯವಾಗುತ್ತವೆ.

ರಸ್ತೆಯಲ್ಲಿ ನಡೆಯುವಾಗ, ವೃತ್ತದ ಬಳಿ, ಕಾಲುದಾರಿಗಳಲ್ಲಿ, ಅಡ್ಡರಸ್ತೆ, ಮುಖ್ಯ ರಸ್ತೆಗಳಲ್ಲಿ...ಎಲ್ಲ ಕಡೆಯಲ್ಲಿ ಒಂದೊಂದು ರೀತಿಯ ಕಟ್ಟುಪಾಡು, ವ್ಯವಸ್ಥೆ ಇರುತ್ತದೆ. ಹಾಗೆಯೇ ಪಾದಚಾರಿಗಳು, ಎರಡು ಚಕ್ರ ವಾಹನದ ಚಾಲಕರು, ತ್ರಿಚಕ್ರ ವಾಹನ ಚಾಲಕರು, ನಾಲ್ಕು ಚಕ್ರ ವಾಹನ ಚಾಲಕರು...ಇತ್ಯಾದಿ ಎಲ್ಲರ ವಾಹನದ, ನಡಿಗೆಯ ಮಿತಿಗಳೂ ಇರುತ್ತವೆ. ಸಾಗುತ್ತಿರುವ ಮಾರ್ಗ, ಮತ್ತು ಚಲಿಸುತ್ತಿರುವ ವಾಹನದ ಮಿತಿ ಎರಡನ್ನೂ ಗಮನದಲ್ಲಿರಿಸಿ ಚಲಿಸುವಾಗ ಮಾತ್ರ ಸರಿಯಾದ ರೀತಿ ಚಲಿಸಲು ಸಾಧ್ಯ. ಅದನ್ನು ಮೀರಿ ನಡೆದಾಗಲೇ ಅಪಘಾತಗಳು ಸಂಭವಿಸುವುದು. ರಸ್ತೆಯ ಧರ್ಮ, ವಾಹನ ಧರ್ಮ ಮತ್ತು ಚಲನೆಯ ಧರ್ಮ ಅರಿತು ಸಾಗಬೇಕಾದುದು ರಸ್ತೆಯಲ್ಲಿ ಸಾಗಬೇಕಾದವನ ಧರ್ಮ. ರಸ್ತೆಯಲ್ಲಿ ಸಾಗುವಾಗ ಎಲ್ಲಿಗೆ, ಏಕೆ, ಹೇಗೆ ಎಂಬ ಅಂಶಗಳು ಹೇಗೆ ನಿಖರವಾಗಿರುತ್ತದೆಯೋ ಹಾಗೆಯೇ ಧರ್ಮವನ್ನು ಪಾಲಿಸುವಾಗಲೂ ಸಹ ನಿಖರತೆಯ ಅಗತ್ಯ ಇದೆ. ಅದನ್ನರಿತು ನಡೆದಾಗ ಏಳಿಗೆ ಆಗುವುದರಲ್ಲಿ ಸಂಶಯವೇ ಇಲ್ಲ.

ಧರ್ಮ ಎಂಬುದು ಆಸ್ತಿಕರ ಸೊತ್ತಲ್ಲ, ನಾಸ್ತಿಕರ ವೈರಿಯೂ ಅಲ್ಲ. ನಿರ್ಲಿಪ್ತರ ನಿರ್ಲಕ್ಷ್ಯವೂ ಅಲ್ಲ. ●

ಐ. ಎ. ಲೋಕಾಪೂರ

# ಇದು ಅನಿವಾರ್ಯ

ಸಮಸ್ಯೆಗಳೆ
ದ್ವೇಷಿಸಲಾರೆ ನಾ ನಿಮ್ಮನ್ನು
ಹುಡುಕುತ್ತಿದ್ದೇನೆ ನಿಮ್ಮ
ಸೃಷ್ಟಿ ಕರ್ತನನ್ನು

ನೀವು ಹೆಪ್ಪುಗಟ್ಟಿದಂತೆಲ್ಲ
ಹೊಳೆ-ಹೊಳೆಯುವುದು ಬಿಸಿ ಚಿಂತನೆ
ಕೆಂಪಗೆ
ಬೆಳೆಯುವುದು, ಬೆಸಗೊಳ್ಳುವುದು ಚೇತನ

ಎಷ್ಟು ದಿನ ತಪ್ಪಿಸಿಕೊಂಡಾರು
ಅವರು ?
ಬೇಟೆಗಾಗಿ ಬೆನ್ನಟ್ಟಿರುವಾಗ

ನಿಮ್ಮೊಡಲ ಅಂತರಂಗದಲಿ
ಅವರ ಅವಸಾನ
ಸಾಮೂಹಿಕ ದಹನ

ಕ್ಷಮಿಸು
ಸಮಸ್ಯೆಯೆ,
ನೆರವಾದೆ ನೀ ಹಗ್ಗ ಹೆಣೆಯಲು
ನಾ ನಿನಗೆ
ನೇಣು ಹಾಕಲೇಬೇಕು ?

# 'ಗ್ರಾಮದೇವತೆಗಳು ಹಾಗೂ ಊರೊಟ್ಟಿನ ಸಂಬಂಧಗಳು'

ಸಿ. ಪಾರ್ವತಮ್ಮ

ಮೇಲಿನ ಶೀರ್ಷಿಕೆಯಲ್ಲಿ ರಹಮತ್ ತರೀಕೆರೆ ಅವರು ಬರೆದಿರುವ ಟಿಪ್ಪಣಿ (ಸಂಕ್ರಮಣ, ಜುಲೈ-ಅಗಸ್ಟ್ ೧೯೯೩) ಓದಲು ಆಕರ್ಷಕವೆಂದರೂ, ಬರಹಗಾರರು ಮಾರ್ಕ್ಸಿಸ್ಟ್ ವಾದಕ್ಕೆ (Marxist ideology) ತೆಕ್ಕೆಬಿದ್ದು ಕಾಮಾಲೆ ಕಣ್ಣಿ ದೃಷ್ಟಿಯನ್ನು ಬಹುದೂರ ಹಾಯಿಸಿ ನನ್ನಂತಹ ಸಾಮಾನ್ಯ ಓದುಗರಿಗೆ ಜಿಜ್ಞಾಸೆ ಹುಟ್ಟುವಂತೆ ಪ್ರೋತ್ಸಾಹಿಸಿದ್ದಾರೆ. ಮಾರ್ಕ್ಸಿಸಂ ಎಲ್ಲಾ ಕಾಲ ದೇಶಗಳಲ್ಲಿ ಒಂದೇ ತೆರನಾಗಿಲ್ಲ, ಹಾಗೂ ಆ ವ್ಯವಸ್ಥೆಯಲ್ಲೂ ಅನೇಕ ನ್ಯೂನತೆಗಳಿವೆ. ಜನಸಾಮಾನ್ಯರಿಗೆ ವಾಕ್ ಸ್ವಾತಂತ್ರ್ಯವಿಲ್ಲ; ಎಷ್ಟೇ ಸಂಕಷ್ಟಗಳನ್ನೆದುರಿಸಿದರೂ ಬಂಡಾಯ ಏಳುವಂತಿಲ್ಲ, ಅನೇಕ ವಿಧವಾದ exploitation ಇದ್ದೇ ಇದೆ. ರಶಿಯ, ಯುಗೊಸ್ಲಾವಿಯ ಹಾಗೂ ಪೂರ್ವ ಯೂರೋಪಿನ ದೇಶಗಳಲ್ಲಿ ಕಮ್ಯುನಿಸಂಗೆ ಆದ ಗತಿ ಅವಲೋಕಿಸಿದರೆ ಇನ್ನೂ ಅನೇಕ ಸಂಗತಿಗಳು ಮನದಟ್ಟಾಗುತ್ತವೆ.

ಶ್ರೇಣೀಕೃತ ಹಿಂದೂ ಸಮಾಜದಲ್ಲಿ ಮೇಲು-ಕೀಳು ಭಾವನೆ ಆಚರಣೆಗಳು ಸಾಮಾನ್ಯವಾಗಿ ಎಲ್ಲಾ ರಂಗದಲ್ಲೂ ಅಡಕವಾಗಿವೆ. ಬೇರೆ ಸಮಾಜಗಳಲ್ಲಿ ವಿಭಿನ್ನ ವ್ಯವಸ್ಥೆ ಇದ್ದು ಮೇಲು-ಕೀಳು ಎದ್ದು ಕಾಣದೆ ಇರಬಹುದು, ಆದರೆ ಭೇಧ ಭಾವನೆಗಳೇ ಇರುವುದಿಲ್ಲವೆಂದು ತಿಳಿದರೆ ತಪ್ಪಾದೀತು.

ರಹಮತರು ಹತ್ತಾರು ಜಾನಪದ ವಿದ್ವಾಂಸರ ಕೊಡುಗೆಗಳನ್ನು ಆಧರಿಸಿ ಟಿಪ್ಪಣಿ ತಯಾರಿಸಿದ್ದಾರೆ, ಅನೇಕ ಗ್ರಾಮದೇವತೆಗಳನ್ನೂ ಸಂಧರ್ಭೋಚಿತವಾಗಿ ಅವರ ideological frame ನಲ್ಲೇ ವಿಶ್ಲೇಷಿಸಿದ್ದಾರೆ, ಜಾನಪದ, ಭಾರತದಂತಹ

ಹಳ್ಳಿಗಳಿಂದ ತುಂಬಿದ ದೇಶವಲ್ಲಿ ಮೊದಲಿನಿಂದಲೂ ತನ್ನದೇ ಆದ ವಿಶಿಷ್ಟ ಪರಂಪರೆ ಪೊಂದಿದೆ ಮತ್ತು ಸಂಸ್ಕೃತಿಯನ್ನೂ ಬೆಳೆಸಿಕೊಂಡಿದೆ. ಆದರೆ ಈ ದೇಶ ಹಾಗೂ ಸಮಾಜದ ಚಾರಿತ್ರಿಕ ಹಿನ್ನಲೆಯಲ್ಲಿ ಬೇರೆ ಬೇರೆ ಸಂಸ್ಕೃತಿಗಳ ಒಡನಾಟದಿಂದ ಇದು ಕಲಬೆರೆಕೆಯಾಗಿದೆ. ಯಾವೊಂದು ಸಂಸ್ಕೃತಿಯೂ ಸಂಪೂರ್ಣ ಶುದ್ಧತೆಯನ್ನು ಉಳಿಸಿಕೊಂಡಿಲ್ಲ. ಅದು ಸಾಧ್ಯವೂ ಇಲ್ಲ. ರಹಮತರು ಹೇಳುವ "ಶಿಷ್ಟ ಸಂಸ್ಕೃತಿಯು" ಎಷ್ಟು ಶಿಷ್ಟವಾಗಿದೆ ?

ಗ್ರಾಮದೇವತೆಗಳ ಹಬ್ಬದಿಂದ ಗ್ರಾಮಸ್ಥರಲ್ಲಿ ಸಹಕಾರ, ಸಂಘಟನಾ ಶಕ್ತಿ ಹುಟ್ಟುತ್ತದೆ, ಭಿನ್ನ ಜಾತಿ ಪಂಗಡಗಳಲ್ಲಿ ಬಾಂಧವ್ಯ ಕುದುರುತ್ತದೆ ಎಂದೆಲ್ಲಾ ಹಲವು ಹತ್ತು ಜಾನಪದ ವಿದ್ವಾಂಸರು ಬರೆದಿದ್ದನ್ನು ಉದಹರಿಸಿದ್ದಾರೆ. ಜೊತೆಗೆ ವಿಮರ್ಶೆಯನ್ನು ಕೊಟ್ಟಿದ್ದಾರೆ. ಅದರಲ್ಲಿ ಮುಖ್ಯವಾಗಿ ಮೇಲ್ಜಾತಿ 'ಭೂಮಾಲೀಕ ಸವರ್ಣೀಯರು' ಕೆಳಜಾತಿ ಹಾಗೂ ದಲಿತರ ಮೇಲೆ ಹೇಗೆ ತಮ್ಮ ಸ್ವಾಮಿತ್ವವನ್ನು ಹಬ್ಬದ ಆಚರಣೆ ನೆಪದಲ್ಲಿ, ಬೇರೆ ಬೇರೆ ಜಾತಿಯವರು ವಹಿಸುವ ಪಾತ್ರಗಳಿಂದ ಸಾಧಿಸುತ್ತಾರೆ ಮುಂತಾಗಿ ವಿವರಣೆ ನೀಡಿದ್ದಾರೆ.

ಗ್ರಾಮದೇವತೆ ಹಬ್ಬ ಕೇವಲ ಗ್ರಾಮಸ್ಥರಿಗೆ ಸೀಮಿತ ಅಲ್ಲ ಅನ್ನುವುದನ್ನು ನಾವು ಗಮನಿಸಬೇಕು. ಗ್ರಾಮದಲ್ಲಿರುವ ಎಲ್ಲಾ ಮನೆಯವರೂ ಅವರವರ ನಂಟರಿಷ್ಟರನ್ನು ಹತ್ತಿರ ಹಾಗೂ ದೂರದ ಊರುಗಳಿಂದ ಕರೆ ತರುತ್ತಾರೆ. ಮದುವೆಯಾಗಿ ಮನೆಯಿಂದ ಹೊರಹೋದ ಹೆಣ್ಣು ಮಕ್ಕಳು ತವರು ಮನೆಗೆ ಬರುವ ಈ ಸದವಕಾಶಕ್ಕೆ ಕಾದಿರುತ್ತಾರೆ. ಮನೆ ಮಠಾರು ಶುದ್ಧ ಮಾಡಿ ಸುಣ್ಣ ಬಳಿದು ಸಾಧ್ಯವಾದಷ್ಟು ಮನೆಯವರಿಗೆಲ್ಲಾ ಹೊಸ ಬಟ್ಟೆ ತರುವುದು ವಾಡಿಕೆ. ಎಲ್ಲಾ ಮನೆಗಳಲ್ಲೂ ಹಬ್ಬದ ವಿಶೇಷ ಅಡಿಗೆ-ಊಟ ನಡೆದಿರುತ್ತದೆ. ಅಂದರೆ ಕೇವಲ ಒಂದು ಊರಿನಲ್ಲಿರುವ ಜಾತಿ ಪಂಗಡಗಳ ಮಧ್ಯೆ ಸಾಮರಸ್ಯ ತರುತ್ತದೆ ಎಂದು ವರ್ಣಿಸಿದರೆ ಗ್ರಾಮದೇವತೆ ಹಬ್ಬದ ಆಚರಣೆಯನ್ನು ತುಂಬಾ ಸಂಕುಚಿತ ದೃಷ್ಟಿಯಿಂದ ನೋಡಿದಂತಾಗುತ್ತದೆ. It reinforces social relationships and strengthens social network ಎನ್ನುವುದು ಸಮಂಜಸ.

ಒಂದು ಗ್ರಾಮಕ್ಕೆ ಒಂದೇ ದೇವತೆ ಇರುವುದಿಲ್ಲ, ಕೆಲವು ಸಲ ಒಂದಕ್ಕಿಂತ ಹೆಚ್ಚು ದೇವತೆಗಳಿರುತ್ತವೆ. ಗ್ರಾಮದೇವತೆ ಹಬ್ಬಗಳು ಸಾಮಾನ್ಯವಾಗಿ ಬೇಸಿಗೆ ಕಾಲದ ಷುರುನಲ್ಲಿ ಜರುಗುತ್ತವೆ. ಅಂದರೆ ಹೊಲ ಮನೆಗಳಲ್ಲಿ ಹೆಚ್ಚಿನ ಎಲ್ಲಾ ಕೆಲಸಗಳೂ ಮುಗಿದು ಜನರಿಗೆ ಬಿಡುವಿದ್ದು, ಅಂದರೆ ಸುಗ್ಗಿ ಮುಗಿದು, ಜನ ಊರು-ಕೇರಿಗಳಿಗೆ ವಿರಾಮವಾಗಿ ಹೋಗಿ ಬರುವಷ್ಟು ಆರಾಮವಾಗಿರುತ್ತಾರೆ.

ಒಂದು ಊರಿನಲ್ಲಿ ಮೇಲ್ಜಾತಿ ಭೂಮಾಲೀಕರಾದರೂ ಎಷ್ಟು 'ಕುಳ'ಗಳಿರುತ್ತಾರೆ? ಅವರೇ ಉಳಿದವರೆಲ್ಲರ ಮೇಲೆ ಅಧಿಕಾರ ಚಲಾಯಿಸುತ್ತಾರೆ. ಹಬ್ಬ ಹರಿದಿನಗಳಲ್ಲಿ ಉಡುಗರೆ ಕೊಟ್ಟು ಕೆಳಜಾತಿಯವರನ್ನು ಪುಸಲಯಿಸುತ್ತಾರೆ. ಮುಂದಿನ ವರ್ಷದ ದುಡಿಮೆಗೆ ಸಜ್ಜುಗೊಳಿಸುತ್ತಾರೆ ಎಂದೆಲ್ಲಾ ಹೇಳುವುದು ಕುಳಿತ ಕಡೆಯಿಂದಲೇ ತಲೆ ಓಡಿಸುವುದೆಂದರೆ ತಪ್ಪಲ್ಲ.

ಕೋಣನ ಬಲಿ ಕೊಡಲು ಸದಾ ಮಾರಲಿಕ್ಕೆ ತರುವುದಿಲ್ಲ, ಹರಕೆ ಮಾಡಿಕೊಂಡ ಯಾರಾದರೂ ಜಾತಿ ಭೇದವಿಲ್ಲದೆ ದೇವರಿಗೆ ಕೋಣವನ್ನು ಬಿಡಬಹುದು. ಹಾಗೇ ಊರ ಗೂಳಿ ಅಂತನೂ ಹೋರಿ ಬಿಡುವುದು ವಾಡಿಕೆ. ದೇವರ ಕೋಣ ಹಾಗೂ ಗೂಳಿ, ಯಾರ ಹೊಲದಲ್ಲಿ ಏನು ಮೇಯಿದರೂ ಪೈರು ಹಾಳು ಮಾಡಿದರೂ ಯಾರೂ ಅದನ್ನು ದೊಡ್ಡಿಗೆ ಹಾಕುವ ಸಾಹಸ ಮಾಡುವುದಿಲ್ಲ. ಅವಕ್ಕೆ ಸ್ವಲ್ಪ 'ಪಾವಿತ್ರ್ಯ' ಬಂದಿರುತ್ತದೆ. ಕೋಣನ ಬಲಿ ಕೊಡುವುದಕ್ಕಿಂತ ಮೊದಲು ಊರಲ್ಲಿ ಮನೆ ಮನೆಗೆ ಮೆರವಣಿಗೆ ತಗೆದುಕೊಂಡು ಹೋಗುತ್ತಾರೆ. ತಲೆಗೆ ಯಥೇಚ್ಛವಾಗಿ ಎಣ್ಣೆ ಹಾಕುತ್ತಾರೆ. ಅದನ್ನು ಬಲಿ ಕೊಡುವಾಗ ಒಂದೇ ಏಟಿಗೆ ಮುಗಿಸಬೇಕೆಂಬ ನಿಯಮವಿದ್ದು, ಹಾಗಾಗದೆ ೩–೪ ಏಟು ಕೊಟ್ಟು ಸಾಯಿಸಿದರೆ ಊರಿಗೆ ವಿಪತ್ತು ಕಾದಿದೆ ಎನ್ನುವ ನಂಬಿಕೆಯೂ ಉಂಟು. ಕತ್ತರಿಸಿದ ಕೋಣನ ತಲೆ ಮೇಲೆ ದೇವಿ ಎದುರು ದೀಪ ಹಚ್ಚಿ, ರುಂಡವನ್ನು ಎತ್ತಿಕೊಂಡು ಹೋಗುತ್ತಾರೆ. ಕೋಣನ ಮಾಂಸ ಹನ್ನೆರಡು ಆಯಗಾರರಿಗೂ ಸಂದಾಯವಾಗಬೇಕು. ಇಂತಿಂತ ಭಾಗ ಗೌಡ, ಶಾನುಭೋಗರು ಮುಂತಾದವರಿಗೆ ಎಂದು ಲೆಕ್ಕಾಚಾರ ಇದೆ. ಆದರೆ ವಾಸ್ತವವಾಗಿ ಅವರೆಲ್ಲರ ಪಾಲು ದಲಿತರಲ್ಲೇ ಹಂಚಿಕೆಯಾಗುತ್ತದೆ. ಹಲಗೆ ಹೊಡೆಯದಿದ್ದರೆ, ವಾದ್ಯ ಮೊಳಗದಿದ್ದರೆ ದೇವರು ಮುಂದೆ ಹೋಗುವುದೇ ಇಲ್ಲ ಎಂಬ ನಂಬಿಕೆ ಕೂಡ ಸರ್ವೇ ಸಾಮಾನ್ಯ. ಎಲ್ಲಾ ಊರ ದೇವತೆಗಳಿಗೆ ಬಸವಿ ಬಿಡುವ ಪದ್ಧತಿ ಇಲ್ಲ. ಹಳೇ ಮೈಸೂರಿನ ಕಡೆ ಆ ಪ್ರತೀತಿನೇ ಇಲ್ಲ. ಹನುಮಂತ, ಆಂಜನೇಯನಂತ ಆಜನ್ಮ ಬ್ರಹ್ಮಚಾರಿಗೆ ಬಸವಿ ಬಿಟ್ಟಿರುವ ಪ್ರಕರಣಗಳಿವೆ, ಬಸವಿ ಬಿಡುವುದು ದಲಿತರಿಗೆ ಸೀಮಿತವಲ್ಲ. ಶೂದ್ರ ವರ್ಣದ ಕೆಳ ಜಾತಿಗಳಲ್ಲಿ ಈ ಪದ್ಧತಿ ವಿಶೇಷವಾಗಿದೆ. ಚಂದ್ರಗುತ್ತಿ, ಉಚ್ಚಂಗಿ ದುರ್ಗ, ಸೌದತ್ತಿ ಇವುಗಳು regional centres ಆಗುತ್ತವೆ. ಗ್ರಾಮದೇವತೆಗಳಿಗಿಂತ ಸ್ವಲ್ಪ ಭಿನ್ನ, ಭಕ್ತರೂ ಹೆಚ್ಚು, ದೂರ ದೂರ ಊರು, ಸೀಮೆಗಳಿಂದ ಬರುತ್ತಾರೆ. ಬಸವಿ ಬಿಡುವುದು, ಬೇವಿನ ಉಡುಗೆ, ಬಾಯಿ ಬೀಗ ಇವೇ ಮುಂತಾದವುಗಳು ಹರಕೆ ಮಾಡಿಕೊಂಡು, ಅದನ್ನು ಪೂರೈಸಲು ಮಾಡುವ ಸೇವೆಗಳು. ದಲಿತೇತರರೂ ಹರಕೆ ಕೋರುತ್ತಾರೆ. ಎಷ್ಟೋ ಜನ ಮೇಲ್ಜಾತಿ ಹೆಣ್ಣು ಮಕ್ಕಳು ಯಲ್ಲಮ್ಮನ 'ಗರತಿ ಮುತ್ತು' ಕಟ್ಟಿಸಿಕೊಂಡಿಲ್ಲವೆ ?

ಎಲ್ಲಾ ಧರ್ಮದಲ್ಲೂ ಮಿತ್‌ಗಳ ಸರಮಾಲೆಯಿಂದೆ ಮಿತ್ ತೆಗೆದರೆ, ಯಾವ ಧರ್ಮವೂ ಬದುಕುಳಿಯುವುದು ಕಷ್ಟ. ಪ್ರಪಂಚದ ಒಂದೊಂದು ಧರ್ಮವೂ ಎಷ್ಟೆಷ್ಟು ಹೋಳುಗಳಾಗಿವೆ, ಆ ಒಂದೊಂದು ಭಾಗಕ್ಕೂ ಮಿತ್ ಹೇಗೆ ಹುಟ್ಟಿ ಬೆಳೆದು ಧರ್ಮದ ತುಕಡಿಯನ್ನು ಎತ್ತಿ ಹಿಡಿದಿವೆ, ಎನ್ನುವುದು ವರ್ಣನೆಗೆ ನಿಲುಕ ದಿರುವ ವಿಷಯ. ಹಿಂದೂ ಧರ್ಮದಲ್ಲಿ, ಶಿಷ್ಟ, ಜಾನಪದಗಳಿಗೆ ಮಾತ್ರ ಮಿತ್ ಇವೆ. ಬೇರೆ ಯಾವುದಕ್ಕೂ ಇಲ್ಲ ಎನ್ನುವಂತಿಲ್ಲ. Virgin Mary ಎಂದು ಕೇಳಿದ್ದೇವೆ ಹಾಗೆ Sacred Quoran, ವೇದ ಪುರಾಣ ಆಯಾಯ ಧರ್ಮದ ವರಿಗೆ ಶ್ರೇಷ್ಠ. ಅದನ್ನು ಪರೀಕ್ಷಿಸಿದವರು heretics ಆಗುತ್ತಾರೆ.

ನಮ್ಮ ದೇಶದ ಎಲ್ಲಾ ಹಳ್ಳಿಗಳಲ್ಲೂ ಬ್ರಾಹ್ಮಣರೂ ಇಲ್ಲ, ಮುಸಲ್ಮಾನರೂ ಇಲ್ಲ. ಊರಿಗೆ ಒಂದೆರಡು ಮನೆ ಬ್ರಾಹ್ಮಣರಿದ್ದರೆ, ಬ್ರಾಹ್ಮಣೇತರರ ಮೇಲೆ ಅವರು ಅಪಾರವಾಗಿ ಅವಲಂಬಿಸಿರಬೇಕಾಗುತ್ತದೆ. ಗ್ರಾಮ ಕಾಪಾಡುವ ಗ್ರಾಮ ದೇವತೆಗೆ ಎಲ್ಲರೂ ಋಣಿಯಾಗಿರುತ್ತಾರೆ. ಕಷ್ಟದಲ್ಲಿ ಹರಿಕೆ ಕಟ್ಟಿಕೊಳ್ಳುತ್ತಾರೆ. ಪೂಜೆ ಮಾಡುತ್ತಾರೆ. ಹಣ್ಣು ಕಾಯಿ ಕೊಡಬಹುದು. ಕೋಳಿ, ಕುರಿನೂ ಆಗಬಹುದು. ಬೇರೆಯವರಿಂದ ಇವರ ಪರವಾಗಿ ಹರಿಕೆ ಸಲ್ಲಿಸುತ್ತಾರೆ. ಹಾಗೆ ಬಂದು ಮೊಹರಂ ಹಬ್ಬ, ಹಳ್ಳಿಗಳಲ್ಲಿ ಎಲ್ಲರಿಂದಲೂ ಆಚರಿಸಲ್ಪಡುತ್ತದೆ. ಒಂದೆರಡು ಮನೆ ಮುಸಲ್ಮಾನರಿದ್ದರೆ, ಮೊಹರಂ ಅವರಿಂದ ಅಷ್ಟೊಂದು ಅದ್ಧೂರಿಯಾಗಿ ನಡೆಯಲಾರದು. ಹುಲಿವೇಷ, ಕಿಚ್ಚು ಹಾಯುವವರು ಹಾಗೂ ಸಕ್ಕರೆ 'ಓದಿಸುವವರು' ಹೆಚ್ಚು ಇತರೆ ಧರ್ಮೀಯರೇ ಇರುತ್ತಾರೆ.

**ಧರ್ಮ ಐಕ್ಯತೆ ತರಬಲ್ಲದು, ಅಷ್ಟೇ ಒಡಕುಂಟು ಮಾಡಬಲ್ಲದು.** ಇದು ಜನಸಾಮಾನ್ಯರಿಗೆ ಹಾಗೂ ಘನ ವಿದ್ವಾಂಸರಿಗೂ ಮಾದಕ ವಸ್ತುವಿನಂತೆ ಆಗಬಲ್ಲದು. ಒಂದೇ ಧರ್ಮೀಯರಲ್ಲೂ ಸದಾ ಕಾಲ ಐಕ್ಯತೆ ಇರುವುದಿಲ್ಲ. ದಿನ ನಿತ್ಯದ ಜೀವನದಲ್ಲಿ ಸಂಘರ್ಷಕ್ಕೆ ತೆರೆ ಹಾಕಿ ಖುಷಿಯಾಗಿ ಕಾಲ ಕಳೆಯಬಹುದು. ಗ್ರಾಮದೇವತೆಗಳ ಹಬ್ಬ ಅಂತಹ ಒಂದು ಅವಕಾಶವನ್ನು ಜಾತಿ–ವರ್ಗ, ಊರು –ಕೇರಿ ಭೇದವಿಲ್ಲದೆ ತಾತ್ಕಾಲಿಕವಾಗಿ ಒದಗಿಸುತ್ತದೆ. ವಿಮರ್ಶೆ, ವಿಡಂಬನೆ ಮಾಡುವಾಗ ಆದಷ್ಟು ಸಮಗ್ರ ದೃಷ್ಟಿ ಹೊಂದಿರುವುದು ಒಳ್ಳೆಯದು. ಯಾವುದೋ ಒಂದು point ಎತ್ತಿ ಉದಾಹರಿಸಿ, ಒಂದು ತೀರ್ಮಾನಕ್ಕೆ ಬರುವುದು ಅಡ್ಡ ಗೋಡೆ ಮೇಲೆ ದೀಪ ಇಟ್ಟ ಹಾಗೆ ಆಗುತ್ತದೆ.

ಊರದೇವರ ದೇವಸ್ಥಾನ ವಶಪಡಿಸಿಕೊಂಡರೆ ಯುದ್ಧದಲ್ಲಿ ಗೆದ್ದಂತೆ. ಈ ತೆರನಾದ ಆಚರಣೆ ನಮ್ಮ ಸಮಾಜದ ಮಧ್ಯಕಾಲೀನ ಯುಗ (feudal times) ದಲ್ಲಿ ಯಥೇಚ್ಛವಾಗಿ ಜಾರಿಯಲ್ಲಿತ್ತು. ಇಬ್ಬರು ರಾಜರು ಯುದ್ಧಕ್ಕೆ ಅಣಿಯಾದರೆ

ದಂಡೆತ್ತಿ ಬಂದವರು ಊರ ಮಧ್ಯದಲ್ಲಿರುವ ಗ್ರಾಮದೇವತೆ ಗುಡಿಯನ್ನು ವಶಪಡಿಸಿ ಕೊಂಡರೆ ಅವರು ಗೆದ್ದಂತೆ, ಸೋಲನ್ನು ಒಪ್ಪುವುದರ ಜೊತೆಗೆ ಕಪ್ಪ ಕಾಣಿಕೆ ಗಳೂ ತೀರ್ಮಾನವಾಗುತ್ತಿದ್ದವು. ಮಧ್ಯಕಾಲದ ಕೇರಳ ರಾಜ್ಯದಿಂದ ಇದಕ್ಕೆ ಪುರಾವೆ ದೊರಕುತ್ತದೆ ಬಹುಶಃ ಮುಸಲ್ಮಾನರು ದಂಡೆತ್ತಿ ಬಂದು ಹಿಂದೂ ದೇವ ಸ್ಥಾನಗಳನ್ನಾಕ್ರಮಿಸಿ, ವಿಗ್ರಹಗಳನ್ನು ಒಡೆದು ಹಾಕಿದ್ದರ ಅರ್ಥವೂ ಇದೇ ಧಾಟಿ ಯಲ್ಲಿ ನಡೆದಿರಬೇಕು. ಒಬ್ಬರ ಮೇಲೆ ಸ್ವಾಮಿತ್ವ ಸಾಧಿಸಲು ದೇವಸ್ಥಾನ ವಶಪಡಿಸಿ ಕೊಂಡರೆ ಸಾಕಿತ್ತು. ಅದು ಹೇಗೋ ಚರಿತ್ರಕಾರರು ಈ ವಿಷಯದ ಮೇಲೆ ಸಾಕಷ್ಟು ಬೆಳಕು ಚೆಲ್ಲದೆ, ಇವೊತ್ತು ಕೋಮುವಾದಕ್ಕೆ ನಾಂದಿ ಹಾಕಿದ್ದಾರೆ. ಊರಲ್ಲಿ ಪ್ಲೇಗು, ಕಾಲರಾ ಬಂದರೆ ಊರಿನವರೆಲ್ಲಾ ದವಸ-ಧಾನ್ಯ, ಹಣ ಹಾಕಿ, ಪ್ಲೇಗು, ಕಾಲರಾ ಮಾರಿಯನ್ನು ಊರ ಗಡಿ ದಾಟಿಸುವುದು ಇಂದೂ ಎಲ್ಲಾದರೂ ನೋಡಲು ಸಿಕ್ಕಬಹುದು. ಇವರಲ್ಲಿ ಬ್ರಾಹ್ಮಣ-ಬ್ರಾಹ್ಮಣೇತರರು ಅಥವಾ ಜಾತಿ ಪಂಗಡಗಳ ಭೇದ ಬರುವುದಿಲ್ಲ. ಪ್ಲೇಗು, ಕಾಲರಕ್ಕೆ ಯಾರೂ ಬಲಿಯಾಗ ಬಹುದು. ಆದುದರಿಂದ ಆ ದೇವತೆಯ ಮರದ ವಿಗ್ರಹ ಮಾಡಿ ಹೊಸ ಸೀರೆ ಉಡಿಸಿ ಉಡಿಯಕ್ಕಿ ಹಾಕಿ ಭರ್ಜರಿ ಪೂಜೆ ಮಾಡಿ ಊರ ಗಡಿ ದಾಟಿಸಿದರೆ ಊರಿನವರೆಲ್ಲ ರಿಗೂ ಕ್ಷೇಮ ಎಂಬ ನಂಬಿಕೆ. ಮಳೆ ಬಾರದೆ ಬರಗಾಲ ಪರಿಸ್ಥಿತಿ ಬಂದರೂ ಇದೇ ವಿಧವಾದ ಆಚರಣೆಗಳು ರೂಢಿಯಲ್ಲಿವೆ.

ಕೊನೆಯದಾಗಿ ಗ್ರಾಮದೇವತೆಗಳ ಪೂಜಾರಿಗಳು ಸಾಧಾರಣವಾಗಿ ಶೂದ್ರ ವರ್ಣ ದಿಂದ ಬರುತ್ತಾರೆ. ಬ್ರಾಹ್ಮಣರು, ಲಿಂಗಾಯಿತ ಪೂಜಾರರಿರುವುದಿಲ್ಲ. ಬ್ರಾಹ್ಮಣ ರಿಗೆ, ಬ್ರಾಹ್ಮಣೇತರರು ಶೂದ್ರರಾದರೆ, ಲಿಂಗಾಯಿತರಿಗೆ (ಅವರೂ ಶೂದ್ರ ವರ್ಣಕ್ಕೆ ಸೇರಿದ್ದರೂ) ಲಿಂಗಾಯಿತೇತರರು "ಕಪ್ಪು ಮಂದಿ, ಕಾಟಗರು", ಅಂದರೆ ಮಾಂಸ ಮದ್ಯ ಸೇವಿಸುವವರು ಎಂದರ್ಥ. ಲಿಂಗಾಯಿತರಲ್ಲೇ ಕುಡಿದು-ತಿನ್ನು ವವರಿಗೆ ಏನು ಹೇಳುತ್ತಾರೋ ಗೊತ್ತಿಲ್ಲ. ಒಟ್ಟನಲ್ಲಿ ಒಂದು ಊರಿನಲ್ಲಿ ಮೇಲು ಜಾತಿಯರು ಲಿಂಗಾಯಿತರಿದ್ದರೆ, ಅಲ್ಲೂ ಶಿಷ್ಟ ಸಂಸ್ಕೃತಿ, ಜಾನಪದದ ಮೇಲೆ ಎರಗಬಹುದು. ಶಿಷ್ಟ ಸಂಸ್ಕೃತಿ ಈಗ ಶಿಷ್ಟ ಸಮಾಜದ ಪ್ರತೀಕವೇನಲ್ಲ, ಎಲ್ಲಾ ಜಾತಿಗಳಲ್ಲೂ ವರ್ಗದ ಆಧಾರದ ಮೇಲೆ ಶಿಷ್ಟ ಸಂಸ್ಕೃತಿ ಅನುಕರಣೆ, ಆಚರಣೆ ವಿಶೇಷವಾಗಿ ಬೆಳೆದಿದೆ. ಇದಕ್ಕೆ ಉದಾಹರಣೆ ಮೊದಲಿಯಾರರು. ಸಸ್ಯಾಹಾರಿ ಮೊದಲಿಯಾರರು ಮಾಂಸಾಹಾರಿಗಳಿಗಿಂತ ಉತ್ತಮರು. ಅವರುಗಳ ಮಧ್ಯೆ ಒಡ ನಾಟ ಕಡಿಮೆ. ಇಷ್ಟೊಂದು ಸಂಕೀರ್ಣ ಸಮಾಜದಲ್ಲಿ ಕೇವಲ ಗ್ರಾಮದೇವತೆ ಹಬ್ಬದ ಒಂದೆರಡು ಮಗ್ಗುಲುಗಳ ಅಭ್ಯಾಸದಿಂದ ಯಾವುದನ್ನೂ ನಿಖರವಾಗಿ ಹೇಳಲು ಸಾಧ್ಯವಿಲ್ಲ. ಬ್ರಾಹ್ಮಣರಿಗಿಂತ ಬ್ರಾಹ್ಮಣ್ಯವನ್ನು ಅನುಕರಣೆ ಮಾಡಿ ಆಚರಿಸುತ್ತಿರುವ ಬ್ರಾಹ್ಮಣೇತರರು ಎಷ್ಟು ಸಜ್ಜನರು ? ●

ಶ್ರೀಕಾಂತ ಪಾಟೀಲ

# ಹಸಿರಾಗಲಿ ಇನ್ನಾದರೂ

ಭುಗಿಲೆದ್ದ ಭೂಮಿಂಗೆ,
ಕರುಳಕುಡಿ ಹೇಗೆ ಬಿಡಲಿ ?
ಎಂಬ ಚಿಂತೆ ತಾಯಿಗೆ,
ಭೂ ಮಡಲಿಗೆ ಬೆಂಕಿ ಇಟ್ಟವರ್ಯಾರು ?
ಎಂಬ ದಿಗಿಲು ಹೆತ್ತ ಕರುಳಿಗೆ.

ಹಸನ ಹೊಲದ ಹಸಿರು ಸಸಿಗಳು
ಮುರುಟಿ ಕರಕಾಗುತಲಿವೆ ಈ ಝಳಕೆ.
ಈ ಕೊಳ್ಳಿ ಇಟ್ಟವರ್ಯಾರು ?

ಇಲ್ಲಿ ಅಳುತಲಿವೆ,
ಸೊಮಾಲಿಯಾ, ಪ್ಯಾಲಿಸ್ಟೈನ್, ಇರಾನ್-ಇರಾಕ್‌ಗಳು,
ಗೂಡ ಗುಬ್ಬಚ್ಚಿಗಳು,
ತಮ್ಮ ಗೂಡಿಗಾಗಿ, ಗೂಡ ಕುಡಿಗಳಿಗಾಗಿ
ಇದರ ಹಿಂದೆ ಧ್ವನಿಗೂಡಿಸುತ್ತಿವೆ
ಭಾರತ, ಒಡಕ ರಶಿಯಾ, ಯುಗೋಸ್ಲೋವಿಯಾಗಳು.
ಹೇಗೆ ನಂದೀತು ಈ ಬೆಂಕಿ ?

ಹೇಳುವರಿಲ್ಲ ನೀನೂ ಅಳುತಲಿದ್ದೀ ಎಂದು,
ನಿನ್ನ ಸೆರಗಿಗೆ ಬೆಂಕಿ ಇಟ್ಟವರೂ ನಿನ್ನ ಕುಡಿಗಳೇ ಎಂದು.
ತನ್ನ ಸ್ವಾರ್ಥದಳಲಿಗೆ, ಹಾಕಿಕೊಂಡ ಬೇಲಿ ತುಳಿದರೆ,
ಚುಚ್ಚದೇ ಬಿಟ್ಟೀತೆ ಮುಳ್ಳು ?

ಇನ್ನು ಮರೆಸು-
ಷಡ್‌ಯಂತ್ರ, ಅತಂತ್ರ, ಕುತಂತ್ರಗಳು,
ಇನ್ನಾದರೂ ತಂಪು ಹಾಲನೆರೆದು ಶಾಂತವಾಗಿಸು,
ಸೌರಪಥದಲ್ಲಿ ನಿನ್ನ ಪಥ ಸದಾ ಹಸಿರಾಗಲೆಂದು.

## ಈ ಸಂಚಿಕೆಯ ಲೇಖಕರು

**ಡಾ. ಸಿ ಎನ್. ರಾಮಚಂದ್ರನ್** ಪ್ರಾಧ್ಯಾಪಕರು. ಇಂಗ್ಲಿಷ್ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳ ಗಂಗೋತ್ರಿ ೫೭೪೧೯೯ **ಸಿದ್ಧರಾಮ ಹೊನ್ಕಲ್** ಸಲಹಾ ಸಂಪಾದಕ 'ಹೊಸ ದಿಕ್ಕು'. ಡಿಗ್ಗಿ ಬಿಲ್ಡಿಂಗ್, ಶಹಾಪುರ ೫೮೫೨೨೩ **ಡಾ. ಎಚ್. ಎಂ. ಮಹೇಶ್ವರಯ್ಯ** ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೫೮೦೦೦೩ **ಡಾ. ಎಂ. ಆರ್. ಮಂದಾರವಲ್ಲಿ** w/o ಜಿ. ಕೆ. ರವೀಂದ್ರಕುಮಾರ, ಸಿ–೧೬, ಆಕಾಶವಾಣಿ ಕ್ವಾರ್ಟರ್ಸ್. ಧಾರವಾಡ ೫೮೦೦೦೮ **ಡಾ ಐ. ಎ. ಲೋಕಾಪೂರ** ಎಸ್. ಬಿ. ಡ್ರೆಸ್ ಲ್ಯಾಂಡ್ (ಮಹಡಿ), ವುಡ್‌ಲ್ಯಾಂಡ್ ಹತ್ತಿರ, ಹರಿಹರ ೫೭೭೬೦೧ **ಡಾ. ಸಿ. ಪಾರ್ವತಮ್ಮ** ನಿರ್ದೇಶಕಿ, ಸಿ ಆರ್ ಆರ್ ಟಿ ಡಿ, ೪೮೩. ಕಾಟೂರ ರಸ್ತೆ, ಗೋಕುಲಂ, ೩ನೇ ಹಂತ, ಮೈಸೂರು ೫೭೦೦೦೨ **ಶ್ರೀಕಾಂತ ಪಾಟೀಲ** ಪ್ರಧಾನ ಕೃಷಿ ಅಧಿಕಾರಿಗಳ ಕಾರ್ಯಾಲಯ, ಬೀದರ ೫೮೫೪೦೧

(ಈ ಸಂಚಿಕೆಯಲ್ಲಿ ಪ್ರಕಟವಾದ, ಡಾ. ಸಿ. ಎನ್. ರಾಮಚಂದ್ರನ್ ಅವರ ಲೇಖನದ ಮೂರನೆಯ ಭಾಗ, 'ರಾಚನಿಕೋತ್ತರ ಚಿಂತನೆ'ಯನ್ನು ಕುರಿತಂತೆ, ಸಂಕ್ರಮಣದ ಮುಂದಿನ ಸಂಚಿಕೆಯೊಂದರಲ್ಲಿ ಪ್ರಕಟವಾಗುತ್ತದೆ–ಸಂ.)

---

# ಬಲಿಷ್ಠ ಕರ್ನಾಟಕಕ್ಕೆ ಭದ್ರ ಬುನಾದಿ

ರಾಜ್ಯೋತ್ಸವ ದಿನಾಚರಣೆ, ಹಳೆಯ ಮೈಸೂರು ರಾಜ್ಯ ಕರ್ನಾಟಕ ಎಂದು ನಾಮಾಂಕಿತಗೊಂಡು, ಅಪಾರ ಪ್ರಗತಿಯನ್ನು ಪ್ರತಿಬಿಂಬಿಸುವ ಸುದಿನ.

ಈ ಸುಂದರನಾಡಿನ ನವನಿರ್ಮಾಣಕ್ಕೆ ಪ್ರೇರಣೆ ನೀಡಿದ್ದ ಆದರ್ಶಗಳನ್ನು ನೆನಪಿಸಿಕೊಂಡು ಪರಿಪಾಲಿಸುವ ಪಣವನ್ನು ನಾವೆಲ್ಲರೂ ಸ್ವೀಕರಿಸಬೇಕಾದ ಸಮಯ ಇದಾಗಿದೆ.

ಸ್ವಾತಂತ್ರ್ಯ ನಂತರ ಒಂದು ನವರಾಜ್ಯವಾಗಿ ಅಂಕುರಗೊಂಡ ಕರ್ನಾಟಕ ಇಂದು ಸಮೃದ್ಧವಾಗಿ ಬೆಳೆದಿದೆ. ಇಲ್ಲಿ ಪ್ರಬುದ್ಧ ಪ್ರಜಾಸತ್ತಾತ್ಮಕ ವ್ಯವಸ್ಥೆಯು ಆಳವಾಗಿ ಬೇರೂರಿ ಶ್ರೀಸಾಮಾನ್ಯನಿಗೆ ಅಧಿಕಾರದ ಫಲವನ್ನು ದಕ್ಕಿಸಿಕೊಟ್ಟಿದೆ.

ಬನ್ನಿರಿ. ರಾಜ್ಯೋತ್ಸವ ದಿನಾಚರಣೆಯ ಈ ಶುಭ ಸಂದರ್ಭದಲ್ಲಿ ಬಲಿಷ್ಠ ಮತ್ತು ಸಂಘಟಿತ ಕರ್ನಾಟಕದ ನಿರ್ಮಾಣಕ್ಕಾಗಿ ಬದ್ಧರಾಗೋಣ, ಆತ್ಮವಿಶ್ವಾಸ ಮತ್ತು ಆತ್ಮಗೌರವದೊಂದಿಗೆ ಬಾಳುವ ನಾಡನ್ನು ಕಟ್ಟೋಣ.

೧೯೯೩-೯೪ನೇಯ ಸಾಲಿಗಾಗಿ ಆಯೋಜನಾ ಗಾತ್ರವನ್ನು ೩೦೨೫ ಕೋಟಿ ರೂ. ಗಳಿಗೆ ಹೆಚ್ಚಿಸಲಾಗಿದ್ದು, ಇದು ಕಳೆದ ವರ್ಷದ ಬಂಡವಾಳಕ್ಕಿಂತ ಶೇಕಡಾ ೫೮ ರಷ್ಟು ಹೆಚ್ಚಾಗಿದೆ. ● ಮುಂದಿನ ೪ ವರ್ಷಗಳಲ್ಲಿ ವಿದ್ಯುತ್ ಕ್ಷೇತ್ರಕ್ಕಾಗಿ ೧೬ ಸಾವಿರ ಕೋಟಿ ರೂ. ಗಳ ಪ್ರಾರಂಭಿತ ಬಂಡವಾಳ. ೩೦೦೦ ಮೆಗಾವಾಟ್‌ಗಳ ಪ್ರಸ್ತುತ ಸ್ಥಾಪಿತ ಸಾಮರ್ಥ್ಯವನ್ನು ೭೦೦೦ ಮೆಗಾವಾಟ್‌ಗಳಿಗೆ ಹೆಚ್ಚಿಸುವ ಕ್ರಮ. ● ಅರ್ಥವ್ಯವಸ್ಥೆಯನ್ನು ವೈವಿಧ್ಯಗೊಳಿಸಿ, ಕೃಷಿಕರಿಗೆ ಇತರ ಕ್ಷೇತ್ರಗಳಲ್ಲಿ ಕಸುಬುಗಾಗಿ ಪ್ರೋತ್ಸಾಹ. ● ಕೈಗಾರಿಕಾ ಬಂಡವಾಳಕ್ಕೆ ಪೂರಕವಾದ ಕೈಗಾರಿಕಾ ಧೋರಣೆ ಮತ್ತು ಪ್ರೋತ್ಸಾಹಕ ಕ್ರಮಗಳು. ● ಕೈಗಾರಿಕಾ ಕ್ಷೇತ್ರದಲ್ಲಿ ಈಗಾಗಲೇ ೨೪ ಸಾವಿರ ಕೋಟಿ. ರೂಪಾಯಿಗಳನ್ನು ತೊಡಗಿಸಿದ್ದು, ಶತಮಾನದ ಅಂತ್ಯದ ವೇಳೆಗೆ ಇದು ೬೦ ಸಾವಿರ ಕೋಟಿ ರೂ.ಗಳಿಗೆ ಹೆಚ್ಚಲಿದೆ. ೨೬ ● ಲಕ್ಷಕ್ಕೂ ಹೆಚ್ಚು ಮಂದಿಗೆ ಉದ್ಯೋಗಾವಕಾಶಗಳು ● ಪ್ರಜಾಸತ್ತಾತ್ಮಕ ವಿಕೇಂದ್ರೀಕರಣಕ್ಕಾಗಿ ಪಂಚಾಯಿತ್‌ರಾಜ್ ಶಾಸನವನ್ನು ಅನುಷ್ಠಾನಕ್ಕೆ ತಂದು ಗ್ರಾಮ ಪಂಚಾಯಿತ್‌ಗಳಿಗೆ ಹೆಚ್ಚಿನ ಅಧಿಕಾರ. ● ಆಶ್ರಯ ಯೋಜನೆಯನ್ವಯ ಡಿಶೆಂಬರ್ ೧೯೯೫ರ ಅಂತ್ಯದ ಒಳಗೆ ೫೦ ಸಾವಿರ ಮನೆಗಳ ನಿರ್ಮಾಣ. ಮುಂದಿನ ೭ ವರ್ಷಗಳಲ್ಲಿ ಕೊಳಚೆ ಪ್ರದೇಶದ ನಿವಾಸಿಗಳಿಗೆ ಬೃಹತ್ ಗೃಹ ನಿರ್ಮಾಣ ಯೋಜನೆ. ● ೨ ಸಾವಿರ ಇಸವಿಯ ವೇಳೆಗೆ ಪ್ರತಿ ತರಗತಿಗೆ ಒಬ್ಬ ಶಿಕ್ಷಕರನ್ನು ನೇಮಿಸುವ ಕಾರ್ಯಕ್ರಮ. ● ೧೯೯೩ನೇಯ ವರ್ಷವನ್ನು ಕನ್ನಡ ಜಾಗೃತಿ ವರ್ಷವಾಗಿ ಘೋಷಿಸಿ ಅಧಿಕಾರ ಮಟ್ಟದಲ್ಲಿ ಕನ್ನಡಕ್ಕೆ ಆದ್ಯತೆ. ● ಮುಂದಿನ ೨ ವರ್ಷಗಳಲ್ಲಿ ರಾಜ್ಯದಲ್ಲಿ ಸಂಪೂರ್ಣ ಸಾಕ್ಷರತೆಯ ಸಾಧನೆ.

ಒಗ್ಗೂಡಿ ಬೆಳೆಸೋಣ

—ಕರ್ನಾಟಕ ವಾರ್ತೆ—